## ಸಂದರ್ಶನ

ಸಂದರ್ಶನವು ಪ್ರಪಂಚದ ವ್ಯಾಖ್ಯಾನಗಳನ್ನು ಪ್ರಕಟಿಸುತ್ತದೆ, ಏಕೆಂದರೆ ಇದು ಸ್ವತಃ ಒಂದು ವ್ಯಾಖ್ಯಾನದ ವಸ್ತುವಾಗಿದೆ. ಆದರೆ ಸಂದರ್ಶನವು ಪ್ರಪಂಚದ ವಸ್ತುತಃ ವ್ಯಾಖ್ಯಾನವಲ್ಲ. ಬದಲಾಗಿ ಇದು ಸೃಷ್ಟಿಸುವ ಪ್ರಪಂಚಕ್ಕೆ ಒಂದು ವಿವರಣಾತ್ಮಕ ಸಂಬಂಧವನ್ನು ಹೊಂದಿದೆ.

– –– ಡೆನ್ಜಿನ್ 2001, ಪು. ೩೦

ಸಾಮಾಜಿಕ–ವಿಜ್ಞಾನದಲ್ಲಿ ಸಂದರ್ಶನವು ಮಾಹಿತಿ ಸಂಗ್ರಹಣೆಗೆ ಸಾರ್ವತ್ರಿಕವಾಗಿ ಬಳಸುವ ಒಂದು ಕಾರ್ಯ ವಿಧಾನವಿರಬಹುದು. ಹೋಲ್ಸ್ಟೀನ್ ಮತ್ತು ಗುಬ್ರಿಯಮ್ (Holstein and Gubrium, 1995) ಅವರು ಅಂದಾಜು ಮಾಡಿರುವ ಪ್ರಕಾರ ಸುಮಾರು ಶೇ. 90ರಷ್ಟು ಸಾಮಾಜಿಕ-ವಿಜ್ಞಾನದ ಸಂಶೋಧನೆಗಳು ಮಾಹಿತಿ ಸಂಗ್ರಹಣೆಗೆ ಸಂದರ್ಶನವನ್ನೇ ಬಳಸಿಕೊಂಡಿವೆ. ಡೆನ್ಜಿನ್ (Denzin, 2001) ಅವರ ಪ್ರಕಾರ, ನಮ್ಮ ಸಮಾಜವು ಸಂದರ್ಶನ ಸಮಾಜವಾಗಿದೆ ಏಕೆಂದರೆ, ಸಂದರ್ಶನವು ಬಹಳಷ್ಟು ಸಾಮಾಜಿಕ ಸಂದರ್ಭಗಳಲ್ಲಿ ಉಪಯೋಗಿಸುವ ಒಂದು ವಿಧಾನವಾಗಿದೆ (ಉದಾಹರಣೆಗೆ, ವೈದ್ಯಕೀಯವಾಗಿ ಪೂರ್ವಚರಿತ್ರೆಯನ್ನು ಪಡೆಯುವಾಗ) ಹಾಗೂ ಬರಹ ಮತ್ತು ಮೌಖಿಕ ವ್ಯವಹಾರಗಳ ಒಡನಾಟಗಳಲ್ಲಿ ಬಳಸುವ ವಿಧಾನವಾಗಿದೆ. ವಯಸ್ಕರು ಮತ್ತು ಮಕ್ಕಳು ತಮ್ಮ ಸಾಂಸ್ಕೃತಿಕ ಜ್ಞಾನದ ಅಂಗವಾಗಿ ಇಂತಹ ಸಂದರ್ಶನಗಳಿಗೆ ಒಳಪಟ್ಟಿರುತ್ತಾರೆ. ಆದ್ದರಿಂದ, ಸಮಾಜ–ವಿಜ್ಞಾನಿಗಳು ಸಂದರ್ಶನ ವಿಧಾನವನ್ನು ಅನುಮೋದಿಸುವುದು ಅತಿಶಯವೆನಿಸುವುದಿಲ್ಲ.

ಸಂಶೋಧನಾ ಸಂದರ್ಶನಗಳು ವಿವಿಧ ರೀತಿಗಳಲ್ಲಿರಬಹುದು. ಅದು ಕಾಲಕಾಲಕ್ಕೆ ನಡೆಯುವ ಸಹಭಾಗೀ ವೀಕ್ಷಕನನ್ನೊಳಗೊಂಡ ಅಧ್ಯಯನಗಳಲ್ಲಿ ನಡೆಯುವ ಅನೌಪಚಾರಿಕ ಸಂಭಾಷಣೆಯಿಂದ ಪ್ರಾರಂಭವಾಗಿ, ಪ್ರತ್ಯೇಕ ಸಮಯ ಮತ್ತು ಜಾಗ ಇರಬೇಕಾದಂತಹ ಅರೆಸಂಯೋಜಿತ ಸಂದರ್ಶನಗಳವರೆಗೆ ಇರಬಹುದು. ಕೆಲವು ಬಾರಿ ನಡೆಯುವ ವ್ಯಕ್ತಿ ವೀಕ್ಷಣಾ ವಿಧಾನಗಳಲ್ಲದಿದ್ದರೆ, ಸಂಶೋಧಕ ಒಳಪಟ್ಟ ಅವಲೋಕನ ವಿಧಾನದಲ್ಲಿ ಅಲ್ಲಿ ನಡೆಯಲಿರುವ ಚಟುವಟಿಕೆ ಹಾಗೂ ಚರ್ಚಿಸಲಿರುವ ವಿಷಯಗಳನ್ನು ಅದರಲ್ಲಿ ಭಾಗವಹಿಸುವ ಹದಿಹರೆಯದವರು ಮುಂದಾಳತ್ವ ವಹಿಸಿ ನಿರ್ಧರಿಸಲು ಅವಕಾಶ ನೀಡಿದರೆ, ಸಂದರ್ಶನ ವಿಧಾನದಲ್ಲಿ, ಸಂದರ್ಶನದ ರೂಪುರೇಷೆಗಳನ್ನು ಸಂಶೋಧಕನು ಯೋಜಿಸುತ್ತಾನೆ. ಹಾಗೆಂದು ಸಂದರ್ಶನದಲ್ಲಿ ಭಾಗವಹಿಸುವವರಿಗೆ ಸಂಭಾಷಣೆಗಳನ್ನು ನಿರ್ದೇಶಿಸುವ ಅವಕಾಶವನ್ನು ತಡೆಯುವುದಿಲ್ಲ. ಆದರೆ, ಸಾಮಾನ್ಯವಾಗಿ ಸಂದರ್ಶನಗಳು ಪೂರ್ವನಿರ್ಧರಿತ ವಿಷಯಗಳ ಬಗ್ಗೆ ಮಾತನಾಡಲು ಅವಕಾಶ ನೀಡುತ್ತವೆ.

ವೈಯಕ್ತಿಕವಾಗಿ ಅಥವಾ ಸಮೂಹದಲ್ಲಿ ಮಕ್ಕಳನ್ನು ಸಂದರ್ಶಿಸುವುದೆಂದರೆ ಅದು ಪ್ರತಿಫಲದಾಯಕವಾದ ಕೆಲಸ. ಈ ಸಂದರ್ಶನಗಳು ಕಥೆಗಳ ಭಾಗಗಳನ್ನು, ಸಾಮಾಜಿಕ ಅನುಭವಗಳ ವಿವರಣೆಗಳನ್ನು ಹಾಗೂ ಸಂದರ್ಶನಾರ್ಥಿಗೆ ಅನ್ವಯಿಸುವ ಅವುಗಳ ಅರ್ಥಗಳನ್ನು ಸಂದರ್ಶಕನಿಗೆ ನೀಡುತ್ತವೆ. ಪೂರ್ವನಿಯೋಜನೆ, ಸೂಕ್ಷ್ಮವಿಷಯಗಳ ಬಗ್ಗೆ ಗಮನ, ಅಳ್ಳಕವಾದ ಸಂದರ್ಶನ ನಕಾಶೆ, ಹಾಗೂ ಮಕ್ಕಳು ಮತ್ತು ಹದಿಹರೆಯದವರೂ ಕೂಡ ಕೇಳಿಸಿಕೊಳ್ಳಲು ಯೋಗ್ಯರು ಎಂಬ ನಂಬಿಕೆಯಿಂದ ಸಂದರ್ಶನವು ಸರಿಯಾಗಿ ನಡೆಯಬಲ್ಲುದು. ಕೆಲವೊಮ್ಮೆ ಯೋಜಿಸಿದಂತೆ ನಡೆಯದಿದ್ದರೂ ಹಾಗೂ ನಿರೀಕ್ಷಿತ ಫಲಿತಾಂಶ ದೊರೆಯದಿದ್ದರೂ ಕೂಡ ಅದು ಒಂದು ಸಕಾರಾತ್ಮಕ

ಅನುಭವವಾಗಿರುತ್ತದೆ. ಸಮಾಜದ ರಚನಾತ್ಮಕ ಚೌಕಟ್ಟಿನಲ್ಲಿ ವೈಯಕ್ತಿಕ ಅಥವಾ ಸಮೂಹ ಸಂದರ್ಶನವನ್ನು ಒಂದು ಸಾಮಾಜಿಕ ಘಟನೆಯೆಂದು ಪರಿಗಣಿಸಲಾಗುತ್ತದೆ. ಇದರ ಮೂಲಕ ಮಕ್ಕಳು ವಿವಿಧ ಘಟನೆಗಳ ಹಾಗೂ ತಮ್ಮ ಅನುಭವಗಳ ಬಗ್ಗೆ ವಿವರಣೆ ಕೊಡಲು, ಮನನಮಾಡಲು ಸಾಧ್ಯವಾಗುತ್ತದೆ. ವೈಯಕ್ತಿಕ ಸಂದರ್ಶನಗಳು ಮಕ್ಕಳಿಗೆ ಮತ್ತು ಹದಿಹರೆಯದವರಿಗೆ ಒಂದು ವಿಷಯದ ಬಗ್ಗೆ ಅವರ ಅಭಿಪ್ರಾಯಗಳು, ಅವರ ಅನುಭವಗಳನ್ನು ಹಂಚಿಕೊಳ್ಳಲು ಅಥವಾ ಪರ್ಯಾಲೋಚಿಸಲು ಅಗತ್ಯವಾದ ವೈಯಕ್ತಿಕ ಅವಕಾಶವನ್ನು ನೀಡುತ್ತವೆ. ಇಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದಂತೆ, ಮಗು ಮತ್ತು ವಯಸ್ಕರರ ಮಧ್ಯೆ ನಡೆಯುವ ಮಾತುಕತೆಗಳು ಕೇಂದ್ರ ಬಿಂದುವಾಗಿರುತ್ತವೆ. ಸಮೂಹ ಸಂದರ್ಶನವು ಸಂಶೋಧನಕಾರನ ಗಮನವನ್ನು ಎಲ್ಲಾ ಸದಸ್ಯರ ಮೇಲೆ ಹರಡುವಂತೆ ಮಾಡುತ್ತದೆ ಮತ್ತು ಅವರಿಗೆ ತಮ್ಮ ಸಮವಯಸ್ಕರ ಜೊತೆಗಿನ ಒಡನಾಟದಲ್ಲಿ ಸಮಾನವಿಷಯಗಳ ಬಗ್ಗೆ ಚರ್ಚಿಸಲು ಅವಕಾಶ ಉಂಟುಮಾಡುತ್ತದೆ. ಶಾಲೆಗಳಲ್ಲಿ ನಡೆಸಿದ ಸರ್ಕಾರ ಕಡ್ಡಾಯಗೊಳಿಸಿದ ಪರೀಕ್ಷೆಗಳ ಬಗ್ಗೆ ವಿದ್ಯಾರ್ಥಿಗಳ ಅನುಭವಗಳ ಬಗ್ಗೆ ನಾವು ನಡೆಸಿದ ಅಧ್ಯಯನದಲ್ಲಿ, 8ನೇ ತರಗತಿಯ ವಿದ್ಯಾರ್ಥಿಗಳು, ತಮ್ಮ ಸಹಪಾಠಿಗಳು ಪರೀಕ್ಷೆ ಹಾಗೂ ಪರೀಕ್ಷಾ ತಯಾರಿಯ ಬಗ್ಗೆ ಏನು ಹೇಳುತ್ತಾರೆ ಎಂಬುದನ್ನು ಕೇಳುವ ಅವಕಾಶ ದೊರಕಿದುದಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು. ಸಮೂಹ ಸಂದರ್ಶನಗಳಲ್ಲಿ ಸಮವಯಸ್ಕರ ಉಪಸ್ಥಿತಿಯು ಸಂಶೋಧಕನ ಉಪಸ್ಥಿತಿಗಿಂತ ಹೆಚ್ಚಿನ ಆದ್ಯತೆ ಪಡೆಯುತ್ತದೆ. ಇದರಿಂದಾಗಿ ಸಂಶೋಧಕನ ಹತೋಟಿಯು ಸ್ವಲ್ಪಮಟ್ಟಿಗೆ ಕಡಿಮೆಯಾಗಬಹುದು.

ಚಿತ್ರ 6.1, 9 ವರ್ಷದ ಮಕ್ಕಳಿಗೆ ಒಂದು ಗುಂಪಿನಲ್ಲಿ ಕುಳಿತು ಸಂಶೋಧಕನ ಪ್ರಶ್ನೆಗಳನ್ನು, ಅದಕ್ಕೆ ಸಮವಯಸ್ಕರ ಉತ್ತರಗಳನ್ನು ಕೇಳಲು ಹಾಗೂ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಸಾಧ್ಯವಿದೆ ಎಂಬುದನ್ನು ನಿದರ್ಶಿಸುತ್ತದೆ. ಅವರಿಗೆ ಈ ಕೆಲಸ ಮಾಡಲು ಸಾಧ್ಯವಾಗುತ್ತದೆ ಎಂಬುದು ಸತ್ಯಾಂಶವಾದರೂ, ಅವರು ಯಾವಾಗಲೂ ಹಾಗೆ ಮಾಡುತ್ತಾರೆಂದಾಗಲೀ ಅಥವಾ ಇಂತಹ ಒಡನಾಟವೂ ಯಾವಾಗಲೂ ತುಂಬಾ ನೇರವಾದ ವ್ಯವಹಾರವೆಂದಾಗಲೀ ಅರ್ಥವಲ್ಲ. ಈ ಸಮೂಹ ಸಂದರ್ಶನದ ಮೊದಲು 12 ವಿದ್ಯಾರ್ಥಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಲಾಯಿತು. ನಂತರ ಅವರಿಗೆ ತಾವು ಪರೀಕ್ಷೆ ತೆಗೆದುಕೊಂಡದುದರ ಬಗ್ಗೆ ಸ್ವಚಿತ್ರಣ ಮಾಡಲು ಸಮಯಾವಕಾಶ ನೀಡಲಾಯಿತು ಮತ್ತು ಇತರರು ಪರೀಕ್ಷೆಯ ಸಂದರ್ಭದಲ್ಲಿ ತಮಗೆ ಉಂಟಾದ ಭಾವನೆಗಳನ್ನು ವಿವರಿಸಿದುದನ್ನು ಮತ್ತು ಅವುಗಳನ್ನು ಅವರು ಚಿತ್ರದ ರೂಪದಲ್ಲಿ ಹೇಗೆ ವ್ಯಕ್ತಪಡಿಸಿದರು ಎಂದು ಪರಸ್ಪರ ಕೇಳಿಸಿಕೊಂಡರು. ಈರೀತಿ ಸಣ್ಣ ಗುಂಪುಗಳಾಗಿ ಮಾಡಿದ ಮೇಲೆ ಸಂಶೋಧಕಿಯು ಒಂದು ಪಾತ್ರ-ಚಿತ್ರಣದ (ರೋಲ್-ಪ್ಲೆ) ವಿಧಾನವನ್ನು ಅನುಸರಿಸಿದಳು – ಅಂದರೆ, ತಾನು ಓರ್ವ ವಾರ್ತಾಪತ್ರಿಕೆಯ ವರದಿಗಾರಳು ಎಂದು ಹೇಳಿಕೊಂಡಳು. ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನನ್ನು ತಾನು ಹೇಗೆ ಚಿತ್ರಿಸಿಕೊಳ್ಳುತ್ತೀರಿ ಎಂಬುದರ ಬಗ್ಗೆ ಕುತೂಹಲ ಇದೆ ಎಂದು ಹೇಳಿಕೊಂಡಳು. ಈ ವಿಧಾನವು ಉತ್ತಮ ಪ್ರತಿಕ್ರಿಯೆ ನೀಡಿತು. ಆದರೂ ಒಂದು ಗುಂಪಿನಲ್ಲಿ ಒಬ್ಬ ಹುಡುಗನು ಸಂದರ್ಶಕಿಯ ಹಿಂದೆ ನಿಂತು ಸಂದರ್ಶಿಸಲ್ಪಡುತ್ತಿದ್ದ ಹುಡುಗನ ಮುಖ ನೋಡಿ ಪೆದ್ದುಮುಖ ಮಾಡಿ ಅಣಕಿಸಿದುದರಿಂದ ಆ ಗುಂಪಿನವರು ಅನಿಯಂತ್ರಿತವಾಗಿ ನಗುತ್ತಿದ್ದರು.

*

ಸಂಶೋಧಕಿ: ಇಂಗ್ಲಿಷ್ ಭಾಷಾ ಕಲೆ ಪರೀಕ್ಷೆಯಲ್ಲಿ ನೀವು ಉಪಯೋಗಿಸಿದ ಅತಿ ಮುಖ್ಯ ವಿಧಾನ/ತಂತ್ರ ಏನಾಗಿತ್ತು?

ಕೈಲ್ (Kyle): ಮೊತ್ತ ಮೊದಲ ಬಾರಿಗೆ ನಾವು ಖಾಲಿ ಬಿಟ್ಟ ಸ್ಥಳಗಳನ್ನು ತುಂಬುವುದನ್ನು ಮಾಡುತ್ತಿರುವಾಗ ಉಪಯೋಗಿಸಿದ ಮುಖ್ಯ ತಂತ್ರವೆಂದರೆ, ಮೊದಲು ಪ್ರಶ್ನೆಗಳನ್ನು ಓದಿ ನಂತರ ಕೊಟ್ಟಿರುವ ಕಥೆಯನ್ನು ಓದುವುದು.

ಸಂಶೋಧಕಿ: ಸರಿ, ಹಾಗಾದರೆ ಮೊದಲು ನೀವು ಪ್ರಶ್ನೆಗಳನ್ನು ಓದಿ ನಂತರ ಹಿಂದಕ್ಕೆ ಹೋಗಿ ಕಥೆ ಓದಿದಿರಿ.

ಕೈಲ್: ಹ್ಞ, ಮೊದಲ ದಿನ.

ಆಂಡ್ರ್ಯು (Andrew): ನಾನು ಉಪಯೋಗಿಸಿದ ಮುಖ್ಯ ತಂತ್ರವೆಂದರೆ, ಅಥವಾ ಮುಖ್ಯವಲ್ಲದ್ದು, ನಾನು ಶಿಕ್ಷಕಿಯ ಬಳಿಗೆ ಹೋಗಿ ಅವರಿಗೆ ಅದನ್ನು ಓದಿ ಹೇಳಲೇ ಎಂದು ಕೇಳಿ ಅವರಿಗೆ ಓದಿ ಹೇಳಿದೆ. ಈ ರೀತಿ ಮಾಡಿದ್ದರಿಂದ ನನಗೆ ಅದು ಹೆಚ್ಚು ಚೆನ್ನಾಗಿ ಅರ್ಥವಾಯಿತು.

ಮೇಗನ್: ಹ್ಞ! ನಾನು ಇದನ್ನು ಮಾಡಲು ಕಾರಣವೆಂದರೆ, ಕೆಲವು ಬಾರಿ ನಾವು ಒಂದು ಪದವನ್ನು ಬಿಟ್ಟು ಓದಬಹುದು ಮತ್ತು ಆಗ ನಮಗೆ ಅದು ಏನೆಂದು ಅರ್ಥವಾಗುವುದಿಲ್ಲ. ಆಗ ನಾವು ಶಿಕ್ಷಕರ ಬಳಿಗೆ ಹೋಗಿ, "ನನಗೆ ಅರ್ಥವಾಗಲಿಲ್ಲ" ಎನ್ನುತ್ತೇವೆ ಮತ್ತು ಅವರು ಅದನ್ನು ಅವರಿಗೆ ಓದಿ ಹೇಳಲು ಹೇಳುತ್ತಾರೆ ಮತ್ತು ಆಗ ನಮಗೆ ಚೆನ್ನಾಗಿ ಅರ್ಥವಾಗುತ್ತದೆ.

ಸಂಶೋಧಕಿ: ಹಾಗಾದರೆ ಜೋರಾಗಿ ಓದುವುದು ನಿನಗೆ ಸಹಾಯವಾಗುತ್ತದೆ.

ಆಂಡ್ರ್ಯು: ಹೌದು.

ಮೇಗನ್: ನಾನು ಯಾವತ್ತೂ ಈ ರೀತಿ ಮಾಡುವುದನ್ನು ಯೋಚಿಸಿರಲಿಲ್ಲ. ಆದರೆ ಈ ವಿಚಾರ ನನಗೆ ತುಂಬಾ ಇಷ್ಟವಾಯಿತು.

ಸಂಶೋಧಕಿ: ನಿನ್ನಲ್ಲಿ ಯಾವುದಾದರೂ ಮುಖ್ಯವಾದ ವಿಧಾನವಿತ್ತೇ?

ಮೋರ್ಗನ್: ನನ್ನ ಮುಖ್ಯ ತಂತ್ರವೆಂದರ ಓದುವುದು, ಅಂದರೆ ಪ್ರಶ್ನೆಗಳನ್ನು ಒಂದು ಬಾರಿ ಓದುವುದು, ಮತ್ತೆ ಇನ್ನೊಂದು ಬಾರಿ ಓದಿ ಓದುವುದು ಆತವಾ ಒಂದು ಬಾರಿ ಪ್ರಶ್ನೆ ಓದಿದ ನಂತರ ಕಥೆ ಓದುವುದು. ಇದು ಕಡಿಮೆ ಸಮಯ ತೆಗೆದುಕೊಳ್ಳುತ್ತದೆ ಮತ್ತು ಆಗ ಸರಿಯಾದ ಉತ್ತರ ದೊರೆಯದೆ ಆ ಜಾಗದಲ್ಲಿ ಬರೆಯಬೇಕಾದ್ದನ್ನು ಬರೆದು ತುಂಬಬಹುದು.

> ಮೇಗನ್: ಹ್ಞ, ನಾನು ಒಂದು ಉತ್ತರವನ್ನು ಬರೆಯಬೇಕಾದರೆ, ಆ ಪ್ರಶ್ನೆಯನ್ನು ಮೊದಲು ಓದಿ ಅದಕ್ಕೆ ಉತ್ತರ ಬರೆಯಲು ಪ್ರಾರಂಭಿಸುತ್ತೇನೆ, ಅಂದರೆ, ಅದು ಮುಗಿಯುವ ತನಕ ಬರೆಯುತ್ತೇನೆ, ನಂತರ ಮೊದಲಿನಿಂದ ಅದನ್ನು ಓದಿ, ಏನಾದರೂ ಉಳಿದಿದ್ದರೆ ಅದನ್ನು ಬರೆಯುತ್ತೇನೆ. ಅದು ಗೊತ್ತಾಗದಿದ್ದರೆ ಮುಂದಿನ ಪ್ರಶ್ನೆಗೆ ಹೋಗುತ್ತೇನೆ. ಇದರಿಂದಾಗಿ ತುಂಬಾ ಕಷ್ಟವಾಗಿರುವುದು ಕೊನೆಗೆ ಉಳಿದುಕೊಳ್ಳುತ್ತದೆ ಮತ್ತು ಅವುಗಳ ಬಗೆಗೆ ಹೆಚ್ಚು ಯೋಚನೆ ಮಾಡಲು ಸಾಧ್ಯವಾಗುತ್ತದೆ, ಏಕೆಂದರೆ ಅಂತಹವುಗಳು ಬರೀ ಒಂದೆರಡು ಇರುತ್ತವೆ. ಇಲ್ಲದಿದ್ದರೆ ಅವುಗಳನ್ನೇ ಯೋಚನೆ ಮಾಡುತ್ತಾ ಕುಳಿತರೆ ನನ್ನ ಹೆಚ್ಚಿನ ಸಮಯವು ಅವುಗಳಿಗೆ ವ್ಯಯವಾಗಿ ಇತರ ಪ್ರಶ್ನೆಗಳನ್ನು ಉತ್ತರಿಸಲಾಗುವುದಿಲ್ಲ.

ಚಿತ್ರ 6.1: ಉಪನಗರ ಪ್ರದೇಶದ 4ನೆ ತರಗತಿಯ ಮಕ್ಕಳ ಸಮೂಹ ಸಂದರ್ಶನದಿಂದ ಆಯ್ದ ಭಾಗಗಳು.

ಈ ಅಧ್ಯಾಯವು ವೈಯಕ್ತಿಕ ಮತ್ತು ಸಮೂಹ ಸಂದರ್ಶನಗಳ ಗುಣಾವಗುಣಗಳನ್ನು ಚರ್ಚಿಸುತ್ತದೆ, ಮತ್ತು ಸಂದರ್ಶನದಲ್ಲಿ ಮಕ್ಕಳು ಸ್ವತಃ ಪಾಲ್ಗೊಂಡು ಮುಕ್ತವಾಗಿ ಮತ್ತು ನಿರ್ಭಯದಿಂದ ಉತ್ತರಗಳನ್ನು ಕೊಡುವಂತೆ ಮಾಡುವ ವಿವಿಧ ತಂತ್ರಗಳ ಬಗ್ಗೆ ವಿವರಣೆ ಕೊಡುತ್ತದೆ. ಅಧ್ಯಾಯ 4ರಲ್ಲಿ ಚರ್ಚಿಸಿದಂತೆ, ಸಂಶೋಧಕ–ಸಂದರ್ಶನಾರ್ಥಿಗಳ ಸಂಬಂಧ, ಸಂದರ್ಶನ ನಡೆಸುವ ಸನ್ನಿವೇಶ, ಪರಿಸರ ಹಾಗೂ ಸಂದರ್ಶನಗಳ ಉದ್ದೇಶಗಳನ್ನು ಗಣನೆಗೆ ತಂದುಕೊಳ್ಳಬೇಕು.

## ಸಂದರ್ಶನವೆಂಬ ಒಂದು ಸಂಬಂಧ (Interviewing as a relationship)

ಸಂದರ್ಶನವೆಂಬುದು, ಸಮಾಜದ ರಚನಾತ್ಮಕ ಚೌಕಟ್ಟಿನಲ್ಲಿ ಸಂಶೋಧಕ ಮತ್ತು ಸಂದರ್ಶನಾರ್ಥಿಗಳು ಜೊತೆಗೂಡಿ ಈ ವಸ್ತುನಿಷ್ಠ ಪ್ರಪಂಚವನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಒಂದು ಕಥಾನುಭವವನ್ನು ರೂಪಿಸಲು ಬೆಳೆಸುವ ಒಂದು ಸಂಬಂಧ. ಒಂದು ಸಂದರ್ಶನವನ್ನು, "ಒಬ್ಬ ಸಂದರ್ಶನಾರ್ಥಿಯ ಸ್ವಂತ, ನೈಜ, ಪ್ರಾಮಾಣಿಕ, ವಿಶ್ವಾಸಾರ್ಹ ಅಭಿಪ್ರಾಯಗಳ ಪ್ರದರ್ಶನ" ವೆಂದು ಭಾವಿಸಲಾಗುವುದಿಲ್ಲ (ಆಲ್ಡ್ರೆಡ್ ಮತ್ತು ಬರ್ಮನ್ (Alldred & Burman, 2005, ಪು. 181); ಅದು ತನ್ನ ವೈಯುಕ್ತಿಕ ವ್ಯಕ್ತಿತ್ವವನ್ನು ಬಹಿರಂಗಗೊಳಿಸುವುದೂ ಅಲ್ಲ, ಅಥವಾ ಅದು ಯಾವುದೋ ಬಾಹ್ಯ ಪ್ರಪಂಚದ ಪ್ರತಿಬಿಂಬವೂ ಅಲ್ಲ. ವಾಸ್ತವವಾಗಿ, ಪ್ರಕಟಗೊಳಿಸಲು ಯಾವುದೇ ನೈಜ, ವೈಯುಕ್ತಿಕ ವ್ಯಕ್ತಿತ್ವವೂ ಇಲ್ಲ, ಅಥವಾ ಯಾವುದೋ ಒಂದು ಬಾಹ್ಯ ಪ್ರಪಂಚವೂ ಇಲ್ಲ, ಬದಲಾಗಿ, ಸಂದರ್ಭಗಳಿಗನುಗುಣವಾಗಿ ಅನುಭವಗಳನ್ನು ಹಾಗೂ ಅವುಗಳ ಅರ್ಥಗಳನ್ನು ತಿಳಿಯಪಡಿಸುವುದೇ ಒಂದು ಸಂದರ್ಶನ. ಸಂದರ್ಶನವೆಂಬುದು ಒಂದು ಸಹಭಾಗಿತ್ವದಿಂದ ರಚಿಸಿದ ಅನುಭವ ಹಾಗೂ ಅರ್ಥಗಳ ಒಂದು ವಿವರಣೆ. ಚಿತ್ರ 6.1ರಲ್ಲಿ ಸಂಶೋಧಕಿಯ ಅನುಭವಗಳು ಅವರ ಪ್ರಶ್ನೆಗಳಲ್ಲಿ ವ್ಯಕ್ತವಾಗಿವೆ. ಈ ಸಂದರ್ಭದಲ್ಲಿ ಮಕ್ಕಳು ಪರೀಕ್ಷೆ ಬರೆಯುವಾಗ ಅನುಸರಿಸಿದ ವಿಧಾನಗಳ ಬಗ್ಗೆ ತಿಳಿಸುತ್ತದೆ. ಮಕ್ಕಳು ಅನುಸರಿಸಿದ ವಿಧಾನಗಳ ಬಗ್ಗೆ ಹೇಳುವ ಕಥೆಯು ಸಂಶೋಧಕಿ ಮತ್ತು ಸಂದರ್ಶನದಲ್ಲಿ ಪಾಲ್ಗೊಂಡ ಎಲ್ಲಾ ವಿದ್ಯಾರ್ಥಿಗಳೂ ಸೇರಿ ಬರೆದುದಾಗಿರುತ್ತದೆ.

ಎಲ್ಲಾ ಸಂದರ್ಶನಗಳಲ್ಲೂ, ಅದರಲ್ಲಿ ಭಾಗವಹಿಸುವವರು ಕೆಲವು ವಿಷಯಗಳನ್ನು ನಿರ್ಧರಿಸಬೇಕಾಗುತ್ತದೆ. ಅವುಗಳೆಂದರೆ – ಸಂದರ್ಶನದ ಉದ್ದೇಶ, ಸಂದರ್ಶಕನೊಂದಿಗೆ ಅವರ ಸಂಬಂಧ, ಸಮೂಹದಲ್ಲಿ ಅವರು ಇತರ ಸಮವಯಸ್ಕರ ಉಪಸ್ಥಿತಿಯನ್ನು ಹೇಗೆ ನಿಭಾಯಿಸುತ್ತಾರೆ, ಕೆಲವು ನಿರ್ದಿಷ್ಟ ಪ್ರಶ್ನೆಗಳ ಅರ್ಥ, ವಿವಿಧ ಚಟುವಟಿಕೆಗಳಿಗೆ ಮಾರ್ಗದರ್ಶನ, ಹಾಗೂ ಸಂದರ್ಶನವೆಂಬ ಈ ಸಾಮಾಜಿಕ ಚಟುವಟಿಕೆಯ ಬಹಿರಂಗಪಡಿಸಿದ ಹಾಗೂ ಬಹಿರಂಗಪಡಿಸದ ನಿಯಮಗಳು. ಒಂದು ಸಂದರ್ಶನ ಮಾಡುವಾಗ, ಸಂದರ್ಭ, ಸಂದರ್ಶಕರಲ್ಲಿನ ವ್ಯತ್ಯಾಸಗಳು, ಆಸಕ್ತ ವಿಷಯ, ಸಂದರ್ಶನದ ಸಮಯ, ಅದರಲ್ಲಿ ಪಾಲ್ಗೊಳ್ಳುವವರ ವಯಸ್ಸು ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಆಗ ಮಾತ್ರ ಸಂದರ್ಶಕ–ಸಂದರ್ಶನಾರ್ಥಿಗಳ ನಡುವೆ ಉತ್ತಮ ಸಂಬಂಧ ಏರ್ಪಡುತ್ತದೆ ಮತ್ತು ಆ ಸಂದರ್ಶನದಿಂದ ಉತ್ತಮ ಮಾಹಿತಿಗಳು ಲಭ್ಯವಾಗುತ್ತವೆ. ಅತಿ ಮುಖ್ಯವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕಾದ್ದೆಂದರೆ, ಸಂದರ್ಶನವೆಂಬುದು ದಿನನಿತ್ಯದ ಒಡನಾಟವಲ್ಲ, ಆದ್ದರಿಂದ ಸಂದರ್ಶನದಲ್ಲಿ ಹೇಗೆ ಇರಬೇಕು ಮತ್ತು ವರ್ತಿಸಬೇಕು ಎಂಬುದನ್ನು ತಿಳಿದುಕೊಳ್ಳುವುದು, ಅದರಲ್ಲೂ ಅತಿ ಮುಖ್ಯವಾಗಿ ಮಕ್ಕಳ ಜೊತೆಗಿನ ಸಂದರ್ಶನಗಳಲ್ಲಿ ಇವುಗಳನ್ನು ನೆನಪಿಟ್ಟುಕೊಳ್ಳಬೇಕು. ಏಕೆಂದರೆ, ಮಕ್ಕಳು ಸಂದರ್ಶನಗಳನ್ನು ಶಿಕ್ಷಕರ ಅಥವಾ ಇತರ ವೃತ್ತಿಪರರ ಜೊತೆಗಿನ ಚಟುವಟಿಕೆಗಳಂತೆ ಕಾಣುತ್ತಾರೆ.

ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಸಂಶೋಧನೆಯ ವಿಷಯವನ್ನು ವಿವರಿಸಿದಾಗ ಅವರು ಅದನ್ನು ಅರ್ಥಮಾಡಿಕೊಂಡು, ತಾವು ಈ ಸಂದರ್ಶನದಲ್ಲಿ ಪಾಲ್ಗೊಳ್ಳಬೇಕೇ ಬೇಡವೇ ಎಂಬ ನಿರ್ಧಾರ ಮಾಡಲು ಸಮರ್ಥರಾಗಿರುತ್ತಾರೆ ಎಂದು ನಂಬಬಹುದು. ಸಂದರ್ಶನದ ವಿಷಯದ ಮೇಲೆ ಅವಲಂಬಿತವಾದಂತೆ, ಸಂದರ್ಶನದ ಪರಿಣಾಮವಾಗಿ ಕೆಲವು ವಿಷಯಗಳು, ಅವರ ಜೀವನದ ಪರಿಸ್ಥಿತಿ, ಆರೋಗ್ಯಸ್ಥಿತಿಗಳು ಬದಲಾಗುವ ಸಾಧ್ಯತೆಗಳೂ ಇರಬಹುದು ಅಥವಾ ಬದಲಾಗದೆಯೂ ಇರಬಹುದು ಎಂದು ಮಕ್ಕಳಿಗೆ ತಿಳಿಹೇಳುವ ಅವಶ್ಯಕತೆಗಳೂ ಇರುತ್ತವೆ. ಈ ಸಂಧಿಯು ಏನು ಪರಿಣಾಮವನ್ನುಂಟುಮಾಡುತ್ತದೆ, ಅದರಲ್ಲೂ ಸಲಹೆಗಾರರೊಡನೆ, ಚಿಕಿತ್ಸಕರೊಡನೆ, ಮತ್ತು ಪ್ರಕರಣ ನಿರ್ವಾಹಕರೊಡನೆ ಇದೇ ರೀತಿಯ ಒಡನಾಟದಲ್ಲಿರುವ ಮಕ್ಕಳ ಮೇಲೆ ಯಾವ ರೀತಿಯ ಪರಿಣಾಮ ಉಂಟುಮಾಡುತ್ತದೆ ಎಂಬ ಅರಿವಿರಬೇಕು. ಇಂತಹ ಪ್ರಸಂಗಗಳಲ್ಲಿ, ಸಮಸ್ಯೆಗಳನ್ನು ಗುರುತಿಸಿ ಅವುಗಳನ್ನು ಉತ್ತಮಗೊಳಿಸುವುದು ಸಂದರ್ಶನದ ಉದ್ದೇಶವಾಗಿರುತ್ತದೆ. ಆದರೆ, ಇಂತಹ ಸಂದರ್ಭಗಳು ವಿರಳ. ಆದ್ದರಿಂದ ಸಂಶೋಧನಾ ಸಂದರ್ಶನದ ಪರಿಧಿಯನ್ನು ಸ್ಪಷ್ಟಪಡಿಸಿಕೊಳ್ಳುವುದು ಅತ್ಯವಶ್ಯಕ.

ಒಂದು ಸಂದರ್ಶನದ ಸಫಲತೆಯು, ಸಂಶೋಧಕ ಹಾಗೂ ಸಂದರ್ಶನಾರ್ಥಿಗಳ ಒಡನಾಟದಲ್ಲಿನ ಆಪ್ತತೆ, ಆತ್ಮೀಯತೆ ಸಲಿಗೆ ಮತ್ತು ಅದರ ಉದ್ದೇಶದ ಮೇಲೆ ಅವಲಂಬಿತವಾಗಿದೆ. ಇದರಲ್ಲಿ ಸಂದರ್ಶನಾರ್ಥಿಗಳನ್ನು ಯಾವುದೋ ಒಂದು ವಿಷಯದ ಮೇಲೆ ಮಾತನಾಡಲು ಆಹ್ವಾನಿಸಲಾಗುತ್ತದೆ. ಆತ್ಮೀಯವಾಗಿರುವಂತಹ ಈ ಒಡನಾಟವು ಸಂಶೋಧಕನಿಗೆ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಅರಸಲು, ಇನ್ನಷ್ಟು ಸೂಕ್ಷ್ಮವಿಚಾರಗಳನ್ನು ಶೋಧಿಸಲು, ಅಥವಾ "ಅಸ್ಪಷ್ಟ, ಗೊಂದಲಗೊಳಿಸುವಂತಹ, ಹಾಗೂ ಅಲ್ಲಗಳೆಯುವಂತಹ ವಿಷಯಗಳನ್ನು ಸೂಕ್ಷ್ಮವಾಗಿ ಹಾಗೂ ಕ್ರಮಬದ್ಧವಾಗಿ ಬೆಂಬತ್ತುವ ಅಳ್ಳಕವಾದ ಅವಕಾಶವನ್ನು ಕಲ್ಪಿಸುತ್ತದೆ. (ರೋಜರ್ಸ್, ಕೇಸಿ, ಎಕರ್ಟ್, ಮತ್ತು ಹಾಲೆಂಡ್, 2005 ಪು. 159). ಇದಲ್ಲದೇ, ಸಂದರ್ಶನಾಥಿಗಳಿಗೆ, ಸಂದರ್ಶನದ ವಿಷಯಕ್ಕೆ ಅವರದೇ ರೀತಿಯಲ್ಲಿ, ಅವರದೇ ಆದ ಪದಗಳಲ್ಲಿ ಸಂಬಂಧ ಕಲ್ಪಿಸಲು ಸ್ವಾತಂತ್ರ್ಯ ನೀಡುತ್ತದೆ. ಮಕ್ಕಳು ಹಾಗೂ ಯುವಕರಿಗೆ ವಯಸ್ಕರ ಭಾಷೆಯನ್ನು ಉಪಯೋಗಿಸದೆ, ತಮ್ಮದೇ ಭಾಷೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಅವಕಾಶವಿರುತ್ತದೆ. "ಸಂಶೋಧಕನಿಗೆ ಇರುವ ಮುಖ್ಯ ಸವಾಲೆಂದರೆ, ಇಬ್ಬರ ನಡುವಿನ ಆಪ್ತ ಒಡನಾಟವು, ಅಗತ್ಯವಾದ, ವ್ಯಕ್ತಿಗತ

ಮಾಹಿತಿಯನ್ನು ಕಲುಷಿತಗೊಳಿಸದೆ ಅದನ್ನು ಸರಿಯಾಗಿ ಪಡೆಯಲು ಸುಗಮಗೊಳಿಸುವುದಷ್ಟೇ ಆಗಿರುತ್ತದೆ" (ಪಾರ್ಕರ್, (Parker, 1984). ಆದ್ದರಿಂದ, ಸಂಶೋಧಕನು ಕೇವಲ ಸಂಯೋಜನೆ ಮಾಡುವುದು ಮಾತ್ರವಲ್ಲದೆ, ಮೇಲ್ವಿಚಾರಕನೂ ಆಗಿ ಸಂದರ್ಶನಾರ್ಥಿಗಳ ಪಾತ್ರವನ್ನು ಮನ್ನಣೆ ಮಾಡಬೇಕು.

## ಮಕ್ಕಳಲ್ಲಿ ಹಾಗೂ ಸಂದರ್ಶನಕಾರರಲ್ಲಿ ಇರಬೇಕಾದ ಸಾಮರ್ಥ್ಯಗಳು (Competencies of Children and Interviewers)

ಮಕ್ಕಳ ಭಾಷಾ ಸಾಮರ್ಥ್ಯಗಳ ಬಗ್ಗೆ ನಮಗೇನು ಗೊತ್ತಿದೆ ಎಂಬುದರ ವಿವರಣೆ ಕೊಡುತ್ತಾ ಕೋಲ್ಸ್ (Coles, 1996), ಅವರು, ಹೇಗೆ ನಮ್ಮ ಪ್ರಶ್ನೆಗಳು ಭಾಷೆ ಮತ್ತು ಅದರ ಅರ್ಥದ ಬಗ್ಗೆ ನಮಗಿರುವ ಅಭಿಪ್ರಾಯಗಳನ್ನು ಪ್ರತಿಫಲಿಸುತ್ತವೆ ಎಂದು ತಿಳಿಸಲು ಎರಡು ಉದಾಹರಣೆಗಳನ್ನು ಕೊಡುತ್ತಾರೆ. ಮೊದಲನೆಯದಾಗಿ, ಭಾಷೆಯು ಯಾವಾಗ ಜನರಿಗೆ ತಮಗೆ ಬೇಕಾದ್ದನ್ನು ತಿಳಿಯಲು ಮತ್ತು ತಿಳಿಸಲು ಉಪಯೋಗಿಸುವ ಸಂವಹನದ ವಿಧಾನವಾಗಿರುತ್ತದೆಯೋ ಹಾಗೆ ಪ್ರಶ್ನೆಗಳು ಆ ಜ್ಞಾನವನ್ನು ಪಡೆಯಲು ಬೇಕಾದ ಸಾಧನವಾಗುತ್ತವೆ. ಇದನ್ನು ಶಿಕ್ಷಕರ ಪ್ರಶ್ನೆಗಳಿಗೆ ಹೋಲಿಸಬಹುದು. "ಶಿಕ್ಷಕರ ಪ್ರಶ್ನೆಗಳು ಮಿತವಾದ, ವಾಸ್ತವವಾದ ಉತ್ತರಗಳನ್ನು ನಿರೀಕ್ಷಿಸುತ್ತವೆ ಮತ್ತು ಮಕ್ಕಳಿಗೆ ವಿಸ್ತಾರವಾಗಿ ಹಾಗೂ ತಾರ್ಕಿಕವಾಗಿ ಯೋಚಿಸಿ ಉತ್ತರಿಸಲು ಹೆಚ್ಚು ಸಮಯಾವಕಾಶವಿರುವುದಿಲ್ಲ." ಎರಡನೆಯದಾಗಿ, ಭಾಷೆ ಮತ್ತು ಅರ್ಥಗಳು ಒಂದಕ್ಕೊಂದು ಸೇರಿ ಒಂದು ರೂಪ ಕೊಟ್ಟಾಗ, "ನಮ್ಮ ಪ್ರಶ್ನೆಗಳಿಗೆ ಒಂದು ಬಲ ಬರುತ್ತದೆ, ಏಕೆಂದರೆ ಪ್ರಶ್ನೆಗಳ ಪಾತ್ರವು ಆಲೋಚನೆಗಳನ್ನು ಅರ್ಥಮಾಡಿಕೊಳ್ಳುವುದು." ಒಂದು ಸಾಮಾಜಿಕ ರಚನಾತ್ಮಕ ಸಂದರ್ಶನವು ಈ ಎರಡನೆಯ ರೀತಿಯದ್ದಾಗಿದೆ, ಇಲ್ಲಿ ಅರ್ಥವನ್ನು ಸಹನಿರ್ಮಾಣ ಮಾಡಲು ಅವಕಾಶವಿರುತ್ತದೆ.

ಸಂದರ್ಶನಾರ್ಥಿಗಳಾಗಿ ಮಕ್ಕಳ ಸಾಮರ್ಥ್ಯಗಳ ಬಗ್ಗೆ ಬಹಳಷ್ಟು ಬರಹಗಾರರು ಬರೆದಿದ್ದರೂ, ಈ ಸಾಮರ್ಥ್ಯಗಳು ಸಂದರ್ಶನಕಾರ ಹಾಗೂ ಸಂದರ್ಶನಾರ್ಥಿಗಳಲ್ಲಿರುವ ಪರಸ್ಪರ ಬೆರೆತು ಸಂಭಾಷಿಸುವ ಕೌಶಲಗಳ ಮೇಲೆ ಅವಲಂಬಿತವಾಗಿವೆ. ಇಲ್ಲಿಯವರೆಗೆ ಮಕ್ಕಳೊಡನೆ ನಡೆಸಿದ ಸಂಶೋಧನೆಗಳು ತೋರಿಸಿಕೊಟ್ಟಿರುವ ಪ್ರಕಾರ, ಮಕ್ಕಳು, ಸಂಶೋಧನೆಗಳಲ್ಲಿ ಭಾಗವಹಿಸುವ ಸಾಮರ್ಥ್ಯವುಳ್ಳವರಾಗಿರುತ್ತಾರೆ, ಅವರನ್ನು ಏನು ಕೇಳುತ್ತಿದ್ದಾರೆ ಎಂದು ಅರ್ಥಮಾಡಿಕೊಂಡು, ಅದಕ್ಕನುಗುಣವಾಗಿ ಉತ್ತರಿಸುವ ಹಾಗೂ ತಮ್ಮ ಅನುಭವಗಳನ್ನು ಹಂಚಿಕೊಳ್ಳುವ ಸಾಮರ್ಥ್ಯವುಳ್ಳವರಾಗಿರುತ್ತಾರೆ (ಕ್ಲಾರ್ಕ್, Clark,). ಬೇರೆ ಬೇರೆ ಮಕ್ಕಳು, ಅವರವರ ವಯಸ್ಸು, ಅನುಭವವಿಲ್ಲದಿರುವುದು, ಭಾಷಾ ಸಾಮರ್ಥ್ಯ, ಅವಧಾನ ವ್ಯಾಪ್ತಿಗಳಿಗನುಗುಣವಾಗಿ ವಿವಿಧ ರೀತಿಯ ಒಡನಾಟಗಳನ್ನು ಉಂಟುಮಾಡಬಹುದು. ಆದರೆ, ಈ ವ್ಯತ್ಯಾಸಗಳನ್ನು ಪೂರ್ವನಿರ್ಧಾರಿತವಾಗಿಟ್ಟುಕೊಂಡು ಮಕ್ಕಳನ್ನು ಸಂದರ್ಶಿಸಬಾರದು (ಅಂದರೆ, ಇಂತಹ ವಿವಿಧತೆ ಕಂಡುಬರಬಹುದು ಎಂದು ಯಾವಾಗಲೂ ಯೋಚಿಸಬಾರದು). ಬದಲಾಗಿ, ಅವರು ಒಂದು ಹೊಸ, ಅಪರಿಚಿತ ಸನ್ನಿವೇಶದಲ್ಲಿ ಪಾಲ್ಗೊಂಡು ಉತ್ತರಿಸುವ ರೀತಿಯಲ್ಲಿ ಮಕ್ಕಳನ್ನು ಸಂದರ್ಶಿಸಬೇಕು. ಇಲ್ಲವಾದಲ್ಲಿ, ಸ್ಪಷ್ಟವಾಗಿ ಮಾತನಾಡಬಲ್ಲ ಮಗು ಮೌನವಾಗಬಹುದು, ಅಥವಾ ಆತಂಕಕ್ಕೊಳಗಾಗಬಹುದು, ಇಲ್ಲವೇ, ಗಂಭೀರವಾಗಿರುವ ಮಗು ಪೆದ್ದನಂತಾಗಬಹುದು.

ಸಹಭಾಗಿ ವೀಕ್ಷಕನಾಗಿದ್ದುಕೊಂಡು (ವೆಸ್ಟ್‌ಕಾಟ್ ಮತ್ತು ಲಿಟ್ಲ್‌ಟನ್, 2005 ಪು. 147) ಪ್ರತಿಕ್ರಯಿಸುವ ರೀತಿಯಲ್ಲಿ ಪ್ರತಿಯೊಬ್ಬ ಸಂದರ್ಶನಾರ್ಥಿಯೊಡನೆ ವ್ಯವಹರಿಸುವುದರಿಂದ, ಸಂಶೋಧಕನಿಗೆ ಅವರ ವಿವಿಧ ವರ್ತನೆಗಳಿಗೆ, ಅವುಗಳಿಗೆ ತಕ್ಕುದಾದ ರೀತಿಯಲ್ಲಿ ಹಾಗೂ ಸೂಕ್ಷ್ಮವಾಗಿ ಪ್ರತಿಕ್ರಯಿಸಲು ಸಾಧ್ಯವಾಗುತ್ತದೆ. ಇದಕ್ಕೆ ಈ ಉದಾಹರಣೆಯನ್ನು ಹೇಳಬಹುದು – ನಮ್ಮ ಸಂಶೋಧನೆಯ ಕೇಂದ್ರೀಕೃತ ಗುಂಪುಗಳಾಗಿದ್ದ ನಾಲ್ಕನೆಯ ಮತ್ತು ಎಂಟನೆಯ ತರಗತಿಯ ಮಕ್ಕಳ ಪ್ರಥಮ ಭಾಷೆ ಆಂಗ್ಲಭಾಷೆಯಾಗಿರಲಿಲ್ಲ, ಆಗ ನಾವು ತಿಳಿದುಕೊಂಡಿದ್ದೇನೆಂದರೆ,

ಇದರಿಂದಾಗಿ ಅವರು ಗುಂಪಿನಲ್ಲಿ ಜೋರಾಗಿ ಮಾತನಾಡಲು ಇಚ್ಛಿಸುತ್ತಿರಲಿಲ್ಲ. ಆಗ ಅವರ ಈ ಮೌನಕ್ಕೆ, ಅವರ ಸಂಕೋಚ ಅಥವಾ ಪ್ರಶ್ನೆ ಸರಿಯಾಗಿ ಅರ್ಥ ಆಗದಿರುವುದು ಕಾರಣ ಎಂದು ಅರ್ಥ ಕಲ್ಪಿಸುವ ಸಾಧ್ಯತೆಯಿತ್ತು. ನಾವು ಆ ಪ್ರಶ್ನೆಗಳನ್ನು ಬರಹ ರೂಪದಲ್ಲಿ ಕೇಳಿದಾಗ, ಅವರು ಅವುಗಳನ್ನು ಅರ್ಥಮಾಡಿಕೊಂಡರು ಮತ್ತು ಬರಹ ರೂಪದಲ್ಲಿ ಸರಿಯಾಗಿ ಉತ್ತರಿಸಲು ಸಾಧ್ಯವಾಯಿತು. ಅವರಿಗೆ ನಮ್ಮ ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಲು ಅಸಾಧ್ಯವೆಂದು ನಾವು ಊಹಿಸಿಕೊಂಡು ಸುಮ್ಮನಿದ್ದರೆ, ನಾವು ಅವರಿಗೆ ಬದಲಿ ವಿಧಾನದಲ್ಲಿ ಉತ್ತರಿಸಲು ಅವಕಾಶ ಕೊಡುತ್ತಿರಲಿಲ್ಲ.

ಮಗುವಿನ ಅಸಾಮರ್ಥ್ಯಗಳ ಬಗ್ಗೆ ವಾದ ಮಾಡುವುದರ ಬದಲಾಗಿ . . . ಮಗುವಿನ ಚಟುವಟಿಕೆ ಹಾಗೂ ಪ್ರತಿಕ್ರಿಯೆಗಳನ್ನು ಸಂದರ್ಭಕ್ಕನುಗುಣವಾಗಿ ಅರ್ಥಮಾಡಿಕೊಳ್ಳುವುದನ್ನು ಬೆಳೆಸಿಕೊಳ್ಳಬೇಕು. ಮಕ್ಕಳು ಇರುವಂತಹ ಸನ್ನಿವೇಶಗಳು, ಮತ್ತು ಸಂದರ್ಶನಕಾರನ ಪ್ರಶ್ನೆಗಳನ್ನು ಮಕ್ಕಳು ಯಾವ ರೀತಿ ಅರ್ಥೈಸಿಕೊಳ್ಳುತ್ತವೆ, ಮತ್ತು ಅವುಗಳು ಅವರ ಚಟುವಟಿಕೆ ಹಾಗೂ ಕಾರ್ಯಾಚರಣೆಗಳಿಗೆ ಒತ್ತಾಸೆ ಕೊಡುತ್ತವೆಯೋ ಅಥವಾ ಕುಂಠಿತಗೊಳಿಸುತ್ತವೆಯೋ ಎಂದು ಗುರುತಿಸಿಕೊಳ್ಳಬೇಕು. ಇಷ್ಟು ಮಾತ್ರವಲ್ಲದೆ, “ಸಾಮರ್ಥ್ಯ” ಎಂಬ ಕಲ್ಪನೆಯು ತೊಡಕಿನ ವಿಚಾರ ಹಾಗೂ ಅದು ಸಾಂಸ್ಕೃತಿಕ ನಂಬಿಕೆಗಳಿಂದ ಸೂಚಿಸಲ್ಪಟ್ಟಿರುತ್ತವೆ ಮತ್ತು ಸಂದರ್ಶನಾರ್ಥಿಗಳು ಅದನ್ನು ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಗಳಿಗನುಗುಣವಾಗಿ ನಿಭಾಯಿಸುತ್ತಾರೆ ಎಂಬುದನ್ನು ಗುರುತಿಸಿಕೊಳ್ಳಬೇಕಾಗುತ್ತದೆ. (ವೆಸ್ಟ್‌ಕಾಟ್ ಮತ್ತು ಲಿಟ್‌ಲ್‌ಟನ್, ಪು. 146)

ಇದಕ್ಕೆ, ಮಗುವನ್ನು ಒಬ್ಬ ಅರ್ಥಮಾಡಿಕೊಳ್ಳಬಲ್ಲ, ಕಾರ್ಯನಿರತ ಪ್ರತಿನಿಧಿ ಎಂದು ಅಂದುಕೊಳ್ಳಬೇಕಾಗುತ್ತದೆ, ಮತ್ತು ಇದು ಸಂಶೋಧಕರಿಗೆ ಒಂದು ಸವಾಲನ್ನು ಒಡ್ಡುತ್ತದೆ. ಏಕೆಂದರೆ, ಅವರು ಮಕ್ಕಳು ಹಾಗೂ ಹದಿಹರೆಯದವರ ಸಾಂಸ್ಕೃತಿಕ ಅವಕಾಶ ಹಾಗೂ ಸಾಮಾಜಿಕ ಸ್ಥಾನಗಳಲ್ಲಿ ನೆಲೆಸಿರುವುದಿಲ್ಲ. ಚಿತ್ರ 6.2 ಮಕ್ಕಳ ಹಾಗೂ ಹದಿಹರೆಯದವರನ್ನು ಸಂದರ್ಶಿಸುವ ಉತ್ತಮ ಸಂದರ್ಶನಕಾರನಲ್ಲಿ ಇರಬೇಕಾದ ಗುಣವಿಶೇಷಗಳನ್ನು ತಿಳಿಸುತ್ತದೆ.

- ಹದಿಹರೆಯದವರೊಡನೆ ವಿಶ್ವಾಸದ ಸಂಬಂಧವನ್ನು ಬೆಳೆಸಬಲ್ಲನು(ಳು).
- ನೈಜವಾದ ಅನುಭೂತಿಯನ್ನು ಪ್ರದರ್ಶಿಸಬಲ್ಲನು(ಳು).
- ಆತಂಕಗೊಂಡ, ಗಾಬರಿಗೊಂಡ ಅಥವಾ ಪ್ರತಿಕೂಲವಾದ ಹದಿಹರೆಯದವರನ್ನು ಶಾಂತಗೊಳಿಸಬಲ್ಲನು(ಳು).
- ಹದಿಹರೆಯದವರನ್ನು ಆಹ್ವಾನಿಸುತ್ತಾನೆ(ಳೆ) ಮತ್ತು ಅವರ ಪ್ರಶ್ನೆಗಳಿಗೆ ಉತ್ತರಿಸುತ್ತಾನೆ(ಳೆ) ಹಾಗೂ ಸಂದರ್ಶನದ ವೇಳೆಯಲ್ಲಿ ಅವರ ಬಗ್ಗೆ ಕಾಳಜಿ ವಹಿಸುತ್ತಾನೆ(ಳೆ).

- ಸಂದರ್ಶನದ ವೇಳೆಯಲ್ಲಿ ಸಂದರ್ಶನದ ದಿಕ್ಕು ಹಾಗೂ ಅಲ್ಲಿ ಅನುಸರಿಸುವ ಮಾರ್ಗೋಪಾಯಗಳನ್ನು ನಿರ್ಧರಿಸುವುದರಲ್ಲಿ ಹದಿಹರೆಯದವರಿಗೆ ಭಾಗವಹಿಸಲು ಅವಕಾಶ ನೀಡುತ್ತಾನೆ(ಳೆ).
- ಸಂದರ್ಶನದ ಉದ್ದೇಶವನ್ನು ಸ್ಪಷ್ಟವಾಗಿ ತಿಳಿಸುತ್ತಾನೆ(ಳೆ).
- ಸರಿಯಾದ ಭಾಷೆ ಹಾಗೂ ವಾಕ್ಯಗಳನ್ನು ಉಪಯೋಗಿಸುತ್ತಾನೆ(ಳೆ).
- ಮುಕ್ತ ಪ್ರಶ್ನೆಗಳನ್ನು ಮತ್ತು ಅನುಸರಣಾ ಪ್ರಶ್ನೆಗಳನ್ನು ಕೇಳುವುದರ ಮೂಲಕ ಹದಿಹರೆಯದವರನ್ನು ಅವರ ಬಗ್ಗೆ ಹೆಚ್ಚು ಹೇಳಲು ಪ್ರೋತ್ಸಾಹಿಸುತ್ತಾನೆ(ಳೆ).
- ಸಂದರ್ಶನವು ಒಂದೇ ಪ್ರಶ್ನೆಯ ಮೇಲೆ ಕೇಂದ್ರೀಕೃತವಾದರೆ, ಅಥವಾ ಹದಿಹರೆಯದವರು ಪೆದ್ದು ಪೆದ್ದಾಗಿ ಉತ್ತರಿಸುತ್ತಿದ್ದರೆ, ಅದನ್ನು ಮತ್ತೆ ಸರಿ ದಾರಿಗೆ ತರುತ್ತಾನೆ(ಳೆ).

ಚಿತ್ರ 6.2: ಮಕ್ಕಳ ಹಾಗೂ ಹದಿಹರೆಯದವರನ್ನು ಸಂದರ್ಶಿಸುವ ಉತ್ತಮ ಸಂದರ್ಶನಕಾರನಲ್ಲಿ ಇರಬೇಕಾದ ಗುಣವಿಶೇಷಗಳು.

## ಸಂದರ್ಶನದ ಪ್ರಶ್ನೆಗಳು ಹಾಗೂ ನಿಯಮಾವಳಿಗಳ ರಚನೆ

ಪ್ರಶ್ನೆಗಳು ಹಾಗೂ ಉತ್ತರಗಳು ಸಂವಹನದ ರೂಪಗಳು. ಸಂವಹನದ ಎರಡು ಪ್ರಮುಖ ಲಕ್ಷಣಗಳೆಂದರೆ: “ಅವು ‘ಮಾಹಿತಿ’ ಹಾಗೂ ‘ಬಾಂಧವ್ಯ’ದ ಉದ್ದೇಶಗಳನ್ನು ಹೊಂದಿರುತ್ತವೆ.” (ತಮ್ಮಿವಾರ ಮತ್ತು ಎನ್‌ರೈಟ್, 1986, ಪು. 219) “ಮಾಹಿತಿ” ಎಂಬುದು ಈ ಸಂವಹನದ ಮೂಲಕ “ಏನನ್ನು” ತಿಳಿಸಲು ಇಚ್ಛಿಸುತ್ತೇವೆ ಹಾಗೂ “ಬಾಂಧವ್ಯ”ವು ಈ ಒಡನಾಟದ ಸನ್ನಿವೇಶದಲ್ಲಿ ಈ ಮಾಹಿತಿಯು “ಹೇಗೆ” ಅರ್ಥಮಾಡಿಕೊಳ್ಳಲ್ಪಟ್ಟಿತು ಎಂಬುದನ್ನು ತಿಳಿಸುತ್ತದೆ, ಆದರೆ ಇವೆರಡೂ ಯಾವಾಗಲೂ ಒಂದಕ್ಕೊಂದು ಹಾಸುಹೊಕ್ಕಾಗಿರುತ್ತವೆಯೇ ಹೊರತು ಒಂಟಿಯಾಗಿರುವುದಿಲ್ಲ. ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಿರುವ ಬಾಂಧವ್ಯದ ಸವಾಲುಗಳಲ್ಲದೆ, ಇತರ ಬೇರೆ ಬೇರೆ ಪ್ರಶ್ನೆಗಳು ಈ ಒಡನಾಟವನ್ನು ಬೇರೆ ಬೇರೆ ರೀತಿಗಳಲ್ಲಿ ರೂಪಿಸುತ್ತವೆ. ಲಾರ್ಟಿ 1975 ಅವರ ಅಧ್ಯಯನ ಆಧಾರದಿಂದ ತಮ್ಮಿವಾರ ಮತ್ತು ಎನ್‌ರೈಟ್ ಅವರು ಪ್ರಶ್ನೆಗಳನ್ನು ರಚಿಸಲು ನಾಲ್ಕು ಆಯಾಮಗಳನ್ನು ಸೂಚಿಸಿದ್ದಾರೆ. ಅವುಗಳೆಂದರೆ: ಪ್ರತ್ಯಕ್ಷ – ಪರೋಕ್ಷ, ಕಾಲ್ಪನಿಕ – ವಾಸ್ತವಿಕ, ವೈಯಕ್ತಿಕ – ವ್ಯಕ್ತಿಗತವಲ್ಲದ, ಸಂವೇಗಾತ್ಮಕ – ಮಂದ ಸಂವೇದನಾತ್ಮಕ ಪ್ರಶ್ನೆಗಳು.

ಲಾರ್ಟಿ ಅವರು ಶಿಕ್ಷಕರ ಅಧ್ಯಾಪನದ ಉದ್ದೇಶಗಳು ಹಾಗೂ ದೃಷ್ಟಿಕೋನಗಳನ್ನು ಅಧ್ಯಯನ ಮಾಡಿದ್ದರೂ, ಪ್ರಶ್ನೆಗಳ ಸ್ವರೂಪ, ಮಾಹಿತಿ ಹೊರತೆಗೆಯುವುದರಲ್ಲಿ ಅವುಗಳ ಪಾತ್ರಗಳ ಬಗ್ಗೆ ಅವರ ನಿಲುವು ತುಂಬಾ ಉಚಿತವಾದುದು. ಲಾರ್ಟಿ ಅವರು, ಶಿಕ್ಷಕರ ಅನುಭವಗಳ ತಿರುಳನ್ನು ಅರ್ಥಮಾಡಿಕೊಳ್ಳಲು ಮೂರು ರೀತಿಯ ಪ್ರಶ್ನೆಗಳು ಹಾಗೂ ಅವುಗಳ ಉಪಯೋಗಗಳನ್ನು ಚರ್ಚಿಸಿದ್ದಾರೆ: (1) ನೇರ ಮತ್ತು ವೈಯಕ್ತಿಕ, (2) ಪರೋಕ್ಷ ಮತ್ತು ಮೂರ್ತ, ಮತ್ತು (3) ಪರೋಕ್ಷ, ವೈಯಕ್ತಿಕ, ಮೂರ್ತ, ಮತ್ತು ಸಂವೇಗಾತ್ಮಕ ಪ್ರಶ್ನೆಗಳು (ಅಂದರೆ ಸಂವೇಗವನ್ನೊಳಗೊಂಡ). ಮೂರನೆಯದು ಅವರ ಪ್ರಕಾರ ಹೆಚ್ಚು ಮಹತ್ವಪೂರ್ಣವಾದದ್ದು. ನಾವು ನಡೆಸಿದ ನಾಲ್ಕನೆಯ ಮತ್ತು ಎಂಟನೆಯ ತರಗತಿಯ ಮಕ್ಕಳ ಮೇಲಿನ ಅಧ್ಯಯನದಲ್ಲಿ, ನೇರ ಮತ್ತು ವೈಯುಕ್ತಿಕ ವಿಧದ ಪ್ರಶ್ನೆಗೆ ಉದಾಹರಣೆಯೆಂದರೆ, “ನೀನು ಒಂದು ರಾಜ್ಯಮಟ್ಟದ ಪರೀಕ್ಷೆ ಬರೆಯುವಾಗ ತಳಮಳಕ್ಕೊಳಗಾದರೆ ಏನು ಮಾಡುತ್ತೀಯಾ? ಅದನ್ನು ನೀನು ಹೇಗೆ ಕಲಿತಿದ್ದೀಯ?” ಎಂದು. ಒಂದು ಪರೋಕ್ಷ ಮತ್ತು ಮೂರ್ತ ರೂಪದ ಪ್ರಶ್ನೆಗೆ ಉದಾಹರಣೆಯೆಂದರೆ, “ನಿನ್ನ ಆಂಗ್ಲ ಭಾಷಾ ಪರೀಕ್ಷೆಯಲ್ಲಿ ನಿನ್ನ ಶಿಕ್ಷಕರು ನಿನ್ನಿಂದ ಏನು ನಿರೀಕ್ಷೆ ಮಾಡುತ್ತಿದ್ದಾರೆ ಎಂದು ಅವರು ನಿನಗೆ ಹೇಗೆ ತಿಳಿಸುತ್ತಾರೆ?” ಪರೋಕ್ಷ, ವೈಯಕ್ತಿಕ, ಮೂರ್ತ ಮತ್ತು ಸಂವೇಗಾತ್ಮಕ ಪ್ರಶ್ನೆಗೆ ಉದಾಹರಣೆಯೆಂದರೆ, “ರಾಜ್ಯಮಟ್ಟದ ಪರೀಕ್ಷೆಯಲ್ಲಿ ಉತ್ತೀರ್ಣರಾಗದಿದ್ದರೆ ನಿನ್ನ

ಪ್ರಕಾರ ಆ ವಿದ್ಯಾರ್ಥಿಗಳಿಗೆ ಏನಾಗಬಹುದು? ಅವರು, ಅನುತ್ತೀರ್ಣರಾಗಲು ಯಾರು ಕಾರಣರೆಂದು ನೀನು ಭಾವಿಸುವೆ?" ಒಂದಕ್ಕಿಂತ ಹೆಚ್ಚು ವಿಧದ ಪ್ರಶ್ನೆಗಳು ಮಕ್ಕಳಿಗೆ ಅವರ ಅನುಭವಗಳು ಹಾಗೂ ಅವುಗಳಿಗೆ ಅವರು ಕೊಡುವ ಅರ್ಥಗಳನ್ನು ವಿವರಿಸಲು ಹೆಚ್ಚು ಅವಕಾಶ ನೀಡುತ್ತವೆ.

ಒಂದು ಸಾಮಾಜಿಕ ರಚನಾತ್ಮಕ ಸಂದರ್ಶನದಲ್ಲಿ, ಸಂಶೋಧಕನು ತಟಸ್ಥ (ನಿರ್ಣಯಾತ್ಮಕವಲ್ಲದ) ನಿಲುವಿನಿಂದ ಪ್ರತಿಕ್ರಯಿಸುವುದನ್ನು ಪಾಲಿಸಿಕೊಂಡು ಬರಬೇಕು. ಯಾವುದೇ ಉತ್ತರಗಳನ್ನು ಇಷ್ಟಪಡದಿರುವ ಅಭಿಪ್ರಾಯವನ್ನು ಅಥವಾ ಅವುಗಳ ಬಗ್ಗೆ ಅಹಿತವನ್ನು ವ್ಯಕ್ತಪಡಿಸುವುದರಿಂದ (ಅಂದರೆ ಕೆಟ್ಟ ಪದಗಳನ್ನು ಬಳಸುವುದು ಅಥವಾ ಜಾತೀಯತೆಯ/ಜನಾಂಗೀಯ ಟೀಕೆ ಮಾಡುವುದು ಇತ್ಯಾದಿ) ಸಂದರ್ಶನವು ಅಲ್ಲಿಗೇ ಕೊನೆಗೊಳ್ಳಬಹುದು ಅಥವಾ ನಿರ್ದಿಷ್ಟವಾದ ನೈತಿಕತೆಯಿಂದ ನಡೆಸಲ್ಪಟ್ಟ ಯುವ ಅನುಭವದ ಕಥೆಯ ಪುನರ್ನಿರ್ಮಾಣವಾಗಬಹುದು. ನಮಗೆ ಒಂದು ಸಂದರ್ಶನದಲ್ಲಿ ಇಂತಹುದೇ, ಆದರೆ ಸ್ವಲ್ಪ ಭಿನ್ನವಾಗಿ ಪ್ರಕಟಗೊಂಡ ಒಂದು ಅನುಭವವಾಯಿತು. ಅದು ಒಂದು ಸಣ್ಣ ಪಟ್ಟಣದ ಹದಿಹರೆಯದವರ ಗುಂಪಿನ ಮೇಲೆ ನಡೆಸಿದ ಸಂದರ್ಶನವಾಗಿತ್ತು. ಆದರೆ, ಶಾಲಾ – ನಂತರ ನಡೆಯುವ ಕಾರ್ಯಕ್ರಮ ನಡೆಸುತ್ತಿದ್ದ ಕಾರ್ಯಕರ್ತರು ಆ ಸಂದರ್ಶನಕ್ಕೆ ಅಡ್ಡಿಪಡಿಸಿದರು. ಸಂದರ್ಶನದ ನಡುವೆ ಉದ್ಭವಿಸಬಹುದಾದ ಸನ್ನಿವೇಶಗಳನ್ನು ನಿಭಾಯಿಸಲು ನಾವು ಅಸಮರ್ಥರು ಎಂದು ಗ್ರಹಿಸಿ, ಆ ಕಾರ್ಯಕ್ರಮದ ಸಿಬ್ಬಂದಿವರ್ಗದವರು, ಅವರ ಅನುಪಸ್ಥಿತಿಯಲ್ಲಿ ನಾವು ಹದಿಹರೆಯದವರನ್ನು ಸಂದರ್ಶಿಸಲು ಇಷ್ಟಪಡಲಿಲ್ಲ. ಸಂದರ್ಶನದ ವೇಳೆ ಕೆಲವು ಯುವಕರು, ತಮ್ಮ ದೀರ್ಘಕಾಲದ ಹಾಗೂ ವೈಯಕ್ತಿಕ ಅಸಮ್ಮತಿಗಳನ್ನು ಪ್ರದರ್ಶಿಸಿದರು. ಇದರಿಂದಾಗಿ, ಗಲಭೆ ಹಾಗೂ ದೈಹಿಕ ಬಲ ಪ್ರಯೋಗವೂ ಆಯಿತು. ಸಂದರ್ಶಕರಾಗಿ, ಹದಿಹರೆಯದವರೊಳಗಿದ್ದ ಇಂತಹ ಸಂಬಂಧವು, ಅವರು ಈ ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ಹೇಗೆ ಅರ್ಥಮಾಡಿಕೊಂಡಿದ್ದಾರೆಂದು ನಮಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಆದರೆ, ಗಲಭೆಯ ವಾತಾವರಣದಿಂದಾಗಿ, ಕಾರ್ಯಕ್ರಮದ ಸಿಬ್ಬಂದಿವರ್ಗದವರು ಮಧ್ಯಪ್ರವೇಶ ಮಾಡಿ, ಸಂದರ್ಶನವನ್ನು ನಿಲ್ಲಿಸುವಂತೆ ಮಾಡಿದರು. ಹದಿಹರೆಯದವರ ಬಗ್ಗೆ ನಮ್ಮ ತಟಸ್ಥ ನಿಲುವಿನ ಪ್ರತಿಕ್ರಿಯೆಯು ಅವರಲ್ಲಿ ನಮ್ಮ ಬಗ್ಗೆ ಇದ್ದ ವಿಶ್ವಾಸಾರ್ಹತೆಯನ್ನು ಹೆಚ್ಚಿಸಿತು, ಆದರೆ, ಸಿಬ್ಬಂದಿ ವರ್ಗದವರಿಗೆ ನಮ್ಮ ಬಗ್ಗೆ ಇದ್ದ ವಿಶ್ವಾಸಾರ್ಹತೆಯನ್ನು ಕ್ಷೀಣಗೊಳಿಸಿತು.

ತುಂಬಾ ವಿಸ್ತಾರವಾದ ಅಥವಾ ತುಂಬಾ ಅಮೂರ್ತಸ್ವರೂಪದ ಸಂದರ್ಶನದ ನಿಯಮಾವಳಿಗಳನ್ನು ರಚಿಸುವುದು ಒಂದು ಸಾಮಾನ್ಯವಾದ ತಪ್ಪು. ಉದಾಹರಣೆಗೆ, ಒಬ್ಬರು ಈ ರೀತಿ ಕೇಳಬಹುದು – "ಓದಲು ಅಥವಾ ಕಲಿಯಲು ನಿನಗೆ ಪ್ರೇರಣೆ ಏನು?" ಅಥವಾ, "ನಿನ್ನ ಸ್ನೇಹಿತರ ಗುಂಪಿನಲ್ಲಿ ನಿನ್ನ ಸ್ಥಾನವೇನು" (ನಿನ್ನ ಸಂಬಂಧ ಹೇಗಿದೆ?) ಎಂದು ನಿನಗನಿಸುತ್ತದೆ? ಇಂತಹ ಪ್ರಶ್ನೆಗಳು ಮತ್ತಷ್ಟು ಪ್ರಶ್ನೆಗಳನ್ನು ಹುಟ್ಟುಹಾಕುತ್ತವೆ: ಪ್ರೇರಣೆ ಎಂದರೇನು, ಸ್ಥಾನವೆಂದರೇನು, ಅವು ಹೇಗಿರುತ್ತವೆ, ಮತ್ತು ನೀನು ನಿಜವಾಗಿಯೂ ಈ ಪರಿಕಲ್ಪನೆಗಳ ಬಗ್ಗೆ ಏನು ಆರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುವೆ? ಉದಾಹರಣೆಗೆ, ಸ್ಥಾನವೆಂದರೆ, ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ಒಬ್ಬ ವ್ಯಕ್ತಿಯ ಇರುವಿಕೆಯ ಗುಣಮಟ್ಟ ಎಂದು ಅರ್ಥಮಾಡಿಕೊಳ್ಳಬಹುದು; ಇನ್ನೊಂದು ಪರ್ಯಾಯ ಪ್ರಶ್ನೆಯೆಂದರೆ, "ಅನಿರೀಕ್ಷಿತವಾಗಿ ನೀನು ನಿನ್ನ ಚಿಕ್ಕಪ್ಪನೊಡನೆ ಒಂದು ತಿಂಗಳು ಇರಬೇಕಾದರೆ, ನಿನ್ನ ಸ್ನೇಹಿತರು ನೀನಿಲ್ಲವಲ್ಲ ಎಂದುಕೊಳ್ಳುತ್ತಾರೆಯೇ? ಈ ತೆರಪನ್ನು ಮುಚ್ಚಲು ಅವರು ಏನು ಮಾಡಬೇಕು? ಇದರಿಂದ ಯಾರು ಹೆಚ್ಚು ಬಾಧೆಗೊಳಗಾಗುತ್ತಾರೆ? ಯಾಕೆ? ಹೇಗೆ?" ಸಂಶೋಧನೆಯ ಚೌಕಟ್ಟಿನಲ್ಲಿ, ಅದರಲ್ಲಿ ಭಾಗವಹಿಸುವವರ ಪಾತ್ರ, ಅಥವಾ ಪ್ರೇರಣೆಗಳಿಗೆ ಸಂಬಂಧಿಸಿದ ವಿವರಗಳನ್ನು ತಿಳಿದುಕೊಳ್ಳುವುದು ಸಂಶೋಧಕನಿಗೆ ಅವರ ಬಗ್ಗೆ ಅನುಭೂತಿ ತೋರಿಸಲು ಮತ್ತು ಹೆಚ್ಚಿನ ವಿವರಗಳನ್ನು ಹೊರತರುವಂತಹ ಪ್ರಶ್ನೆಗಳನ್ನು ಕೇಳಲು ಅವಕಾಶ ನೀಡುತ್ತದೆ. ಇದು ಮುಖ್ಯವಾಗಿ ಮಕ್ಕಳ ವಿಷಯದಲ್ಲಿ ಹೆಚ್ಚು ಅವಶ್ಯಕವಾದುದು, ಏಕೆಂದರೆ, ಸಾಮಾನ್ಯವಾಗಿ ನಮ್ಮಿಷ್ಟದಂತೆ ಬಳಸುವ ಪದಗಳು ನಾವು

ಅಂದುಕೊಂಡಂತೆ ಇರದೆ, ಅಮೂರ್ತವಾಗಿರುತ್ತವೆ ಹಾಗೂ ಈ ಅಮೂರ್ತ ಪದಗಳನ್ನು ಮಕ್ಕಳ ದೈನಂದಿನ ಅನುಭವಗಳಿಗನುಗುಣವಾಗಿ ಮರುಚಿಂತನೆ ಮಾಡಬೇಕಾದುದು ಅವಶ್ಯಕವಾಗಿರುತ್ತದೆ. ಮುಕ್ತ-ಪ್ರಶ್ನೆಗಳು ಯಾವಾಗಲೂ ಒಳ್ಳೆಯವು. "ಪ್ರಶ್ನೆಗಳು ಮುಕ್ತವಾಗಿದ್ದರೆ ಮಕ್ಕಳಿಗೆ ತಮಗೆ ಪರಿಚಿತವಾದ ವಿಷಯಗಳನ್ನು, ಹಾಗೂ ಅವುಗಳ ಬಗ್ಗೆ ತಮಗೆ ತಿಳಿದಂತೆ ಮಾತನಾಡುವ ವಿಧಾನವನ್ನು ತರಲು ಹೆಚ್ಚಿನ ಅವಕಾಶ ಸಿಗುತ್ತದೆ. ಇದಲ್ಲದೆ, ದಿಕ್‌ರಹಿತ (ಪರೋಕ್ಷ) ಪ್ರಶ್ನೆಗಳು, ಸಮೂಹ ಸಂದರ್ಶನದಲ್ಲಿ ಮಕ್ಕಳಿಗೆ ತಮ್ಮ ಉತ್ತರಗಳನ್ನು ಇತರರ ಉತ್ತರಗಳೊಡನೆ ಸಹಯೋಗಿಸಿಕೊಳ್ಳಲು ಹಾಗೂ ಇತರರ ಪ್ರತಿಕ್ರಿಯೆಗಳ ಮೇಲೆ ವಿಸ್ತರಿಸಲು ಅವಕಾಶ ಕೊಡುತ್ತವೆ"(ಎಡರ್ ಮತ್ತು ಫಿಂಗರ್ಸನ್ 2003, ಪು. 36).

ಬಹುಶಃ, ಪ್ರಶ್ನೆಗಳ ವಿಧಗಳಿಗಿಂತ ಸಂದರ್ಶನದ ಸ್ವರೂಪವು ಹೆಚ್ಚು ಮುಖ್ಯವಾಗಿರುತ್ತದೆ. ಸಂದರ್ಶನವೆಂಬುದು, ಪರಸ್ಪರ ಪರಿಚಯವಿಲ್ಲದ ವ್ಯಕ್ತಿಗಳ ನಡುವಿನ ಅಥವಾ ವ್ಯಕ್ತಿಗಳೊಡನೆ ನಡೆಯುವ ಒಂದು ಒಡನಾಟ. ಸಂದರ್ಶನದ ಸನ್ನಿವೇಶ, ಪ್ರಾಸ್ತಾವಿಕ ಸ್ವಾಗತ, ಪ್ರಾರಂಭದ ಚಟುವಟಿಕೆ, ಆನಂತರದ ಚಟುವಟಿಕೆಗಳು ಹಾಗೂ ಮುಕ್ತಾಯದ ಹೇಳಿಕೆಗಳ ಬಗ್ಗೆ ಸರಿಯಾದ ಗಮನ ಕೊಡುವುದು ಒಂದು ಯಶಸ್ವೀ ಸಂದರ್ಶನದ ಮುಖ್ಯ ಅಂಶಗಳು. ಸಂದರ್ಶನದಲ್ಲಿ ಭಾಗವಹಿಸುವ ಮಕ್ಕಳಿಗೆ ತಕ್ಷಣ ಆದರಣೆಯ ಅನುಭವವಾಗದಿದ್ದರೆ ಅವರು ಹಿಂತಿರುಗಿ ಹೋಗಲು ಬಯಸಬಹುದು. ಈ ಸಂದರ್ಭವನ್ನು ಗಮನಿಸೋಣ. ಗೊತ್ತಾದ ಸಂದರ್ಶನದ ಜಾಗವು ಎಷ್ಟು ಆರಾಮವಾಗಿದೆ, ಮತ್ತು ಎಷ್ಟು ಆಪ್ಯಾಯಮಾನ? ನೀವು (ಸಂದರ್ಶನಕಾರ) ಹಾಗೂ ಸಂದರ್ಶನದಲ್ಲಿ ಭಾಗವಹಿಸುವವರು ಯಾವ ರೀತಿ ಆಸೀನರಾಗುತ್ತೀರಿ? ಒಂದು ಅನೌಪಚಾರಿಕ, ಸ್ನೇಹಮಯ ಸ್ಥಳವನ್ನು ಹುಡುಕಿರಿ, ಅಥವಾ, ಔಪಚಾರಿಕ ಸ್ಥಳವನ್ನು ಬೇರೆ ಬೇರೆ ರಂಗಪರಿಕರಗಳಿಂದ (ದಿಂಬು, ಪ್ರಾಣಿಗಳ ಗೊಂಬೆಗಳು, ಕಾಗದ ಹಾಗೂ ಲೇಖನಿಗಳು) ಆಕರ್ಷಣೀಯವಾಗಿ ಮಾಡಿ, ಕುಳಿತುಕೊಳ್ಳಲು ಅವರಿಗೆ ಒಂದೇ ಗಾತ್ರದ ಕುರ್ಚಿಗಳು ಅಥವಾ ಜಮಖಾನೆಗಳನ್ನು ಇಡಬೇಕು. ದಿನದ ಯಾವ ಸಮಯದಲ್ಲಿ ಸಂದರ್ಶನ ನಡೆಸುತ್ತೀರಿಎಂಬುದನ್ನು ಗಣನೆಯಲ್ಲಿಟ್ಟುಕೊಳ್ಳಬೇಕು. ಆದು ಮಕ್ಕಳ ಇಷ್ಟದ ದೂರದರ್ಶನದ ಕಾರ್ಯಕ್ರಮ ಇರುವ ಸಮಯದಲ್ಲಿರದ ಹಾಗೆ ನೋಡಿಕೊಳ್ಳಬೇಕು. ಇದರ ಜೊತೆಗೆ ಒಂದು ಮೈಚಳಿ ಬಿಡಿಸುವಂತಹ, ಉತ್ತೇಜನ ಕೊಡುವಂತಹ ಚಟುವಟಿಕೆಯ ಅಗತ್ಯವನ್ನೂ ಗಣನೆಯಲ್ಲಿಟ್ಟುಕೊಳ್ಳಬೇಕು.

ಆಸಕ್ತ ವಿಷಯದ ಬಗ್ಗೆ ಸಂಭಾಷಣೆಯಲ್ಲಿ ತೊಡಗುವ ಮುನ್ನ, ಮಗುವಿಗೆ ಸಂದರ್ಶನಕಾರನ ಜೊತೆಗೆ ಸುಗಮವಾಗಿ, ಆರಾಮವಾಗಿ ಮಾತನಾಡಲು ಅನುವಾಗುವಂತೆ ಮಾಡಲು, ಅನೇಕ ವೇಳೆ ಸಂದರ್ಶನಗಳು ಮುಕ್ತ ಪ್ರಶ್ನೆಗಳಿಂದ ಆರಂಭವಾಗುತ್ತವೆ. ಆದರೂ, ಚಿಕ್ಕಮಕ್ಕಳ ಸಂದರ್ಶನ ಮಾಡುವಾಗ, ಪ್ರಶ್ನೆಗಳನ್ನು ಕೇಳುವ ಮೊದಲು ಅವರ ಗಮನ ಸೆಳೆಯುವುದು ಅತೀ ಅಗತ್ಯ. ಇಲ್ಲಿ, ಪ್ರಾರಂಭದ ಮೈಚಳಿ ಬಿಡಿಸುವಂತಹ ಚಟುವಟಿಕೆಗಳು ಚೆನ್ನಾಗಿ ಕೆಲಸ ಮಾಡುತ್ತವೆ. ಅದು ಒಂದು ವೈಯಕ್ತಿಕ ಸಂದರ್ಶನವಾದರೆ, ವಿನ್ನಿಕಾಟ್, 1971ರವರ ಸ್ಕ್ವಿಗ್ಲ್ ಆಟವು (Squiggle game) (ಅಂಕುಡೊಂಕಾದ ಗೆರೆಗಳಿಂದ ಕೂಡಿದ ಆಟ) ಚೆನ್ನಾಗಿ ಕೆಲಸ ಮಾಡುತ್ತದೆ: ಇದರಲ್ಲಿ, ಸಂಶೋಧಕ ಅಥವಾ ಸಂದರ್ಶಕನು ಒಂದು ಕಾಗದದಹಾಳೆಯ ಮೇಲೆ ಒಂದು ಅಂಕುಡೊಂಕಾದ ಗೆರೆ ಎಳೆದು ನಂತರ ಅದರಿಂದ ಏನಾದರೊಂದು ಚಿತ್ರ ಮಾಡುವಂತೆ ಮಗುವಿಗೆ ಹೇಳುತ್ತಾನೆ(ಳೆ). ಮಗು ಅದನ್ನು ಮುಗಿಸಿದ ನಂತರ, ತಾನೂ ಒಂದು ಅಂಕುಡೊಂಕಾದ ಗೆರೆ ಎಳೆದು ನಂತರ ಅದರಿಂದ ಏನಾದರೊಂದು ಚಿತ್ರ ಮಾಡುವಂತೆ ಸಂದರ್ಶಕನಿಗೆ ಹೇಳುತ್ತಾನೆ(ಳೆ). ಸಮೂಹ ಸಂದರ್ಶನದ ಸಂದರ್ಭದಲ್ಲಿ, ಈ ಮೈಚಳಿ ಬಿಡಿಸುವಂತಹ ಚಟುವಟಿಕೆಗಳು, ಗುಂಪಿನ ಸದಸ್ಯರು ಪರಸ್ಪರ ಅರಿತುಕೊಳ್ಳಲು ಹಾಗೂ ಗುಂಪಿನ ಒಗ್ಗಟ್ಟನ್ನು ಬೆಳೆಸಲು ಸಹಕಾರಿಯಾಗುವಂತಿರಬೇಕು. ವಿವಿಧ ಆಟಗಳು, ಉದಾಹರಣೆಗೆ, ಹುಟ್ಟಿದ ತಿಂಗಳಿನ ಪ್ರಕಾರ ಎಲ್ಲರೂ ಸಾಲಾಗಿ ನಿಲ್ಲುವುದು, ಒಂದು ಚೆಂಡನ್ನು ಒಬ್ಬರಿಂದೊಬ್ಬರಿಗೆ ಹಾರಿಸುತ್ತಾ, ತಮ್ಮ ಹೆಸರು ಹೇಳುವುದು, ಅಥವಾ ಒಂದು ಅಚ್ಚುಮೆಚ್ಚಿನ ಚಟುವಟಿಕೆ ಅಥವಾ

ಒಂದು ಸಂಗೀತದ ಗುಂಪು, ಇತ್ಯಾದಿಗಳು ವಿವಿಧ ವಯಸ್ಸಿನ ಗುಂಪುಗಳಲ್ಲಿ ಚೆನ್ನಾಗಿ ಕೆಲಸ ಮಾಡುತ್ತವೆ. ದೃಶ್ಯರೂಪದ ಅಥವಾ ವಿಷಯವನ್ನು ಬಯಲಿಗೆಳೆಯುವ ಮುಖ್ಯ ತಂತ್ರಗಳನ್ನು ಮೈಚಳಿ ಬಿಡಿಸುವ ಚಟುವಟಿಕೆಗಳಿಗಾಗಿ ಮೀಸಲಿಡಬಾರದು. ಏಕೆಂದರೆ, ಅವು ಪ್ರತಿಕ್ರಿಯೆಗಳನ್ನು ಹುಟ್ಟುಹಾಕುವಂತಹ ಮುಖ್ಯ ತಂತ್ರಗಳು. "ಸಣ್ಣ ಮಕ್ಕಳಿಗೆ, ಯಾವುದರಿಂದಲಾದರೂ, ಏನನ್ನಾದರೂ ಮಾಡುವುದು, ಮತ್ತು ಆ ಯಾವುದರ ಬಗ್ಗೆ ಮಾತನಾಡುವುದು ಹೆಚ್ಚು ಸುಲಭವಾಗುತ್ತದೆ. ಮತ್ತು ಭೌತಿಕವಾಗಿ ಇಲ್ಲದಿರುವ ವಸ್ತು ಅಥವಾ ವಿಷಯಗಳ ಬಗ್ಗೆ ಮಾತನಾಡುವುದಕ್ಕಿಂತ, ಅವರಿಗೆ ಅದು ಹೆಚ್ಚು ಆರಾಮವಾಗಿ ಹಾಗೂ ಆಸಕ್ತಿದಾಯಕವಾಗಿ ಇರುತ್ತದೆ" (ತಮ್ಮಿವಾರ ಮತ್ತು ಎನ್‌ರೈಟ್, 1986). "ಕೇವಲ ಸಂವಾದದ ಪ್ರಕ್ರಿಯೆಗಳ ಬಗ್ಗೆ ಗಮನವನ್ನು ಕೇಂದ್ರೀಕರಿಸಿದರೆ, ವಿವಿಧ ಸಾಧನ-ಸಲಕರಣೆಗಳನ್ನು ಸಂವಾದದಲ್ಲಿ ತೊಡಗಿಸಿಕೊಂಡಾಗ ಪಡೆದುಕೊಳ್ಳಬಹುದಾದ ಅರ್ಥವಿವರಣೆಗಳನ್ನು ಕಡೆಗಣಿಸುವಂತಾಗುತ್ತದೆ." (ತಮ್ಮಿವಾರ ಮತ್ತು ಎನ್‌ರೈಟ್, 1986, ಪು. 232). ಚಿತ್ರ 6.3, ಮಕ್ಕಳೊಡನೆ ಮತ್ತು ಹದಿಹರೆಯದವರೊಂದಿಗೆ ಯಶಸ್ವಿಯಾದ ಸಂದರ್ಶನಕ್ಕೆ ಅವಶ್ಯಕವಾದ ಸಲಹೆಗಳನ್ನು ಕೊಡುತ್ತದೆ.

ಸಂದರ್ಶನಕ್ಕೆ ಮೊದಲು:

- ಸಂದರ್ಶನದ ಸಂಪೂರ್ಣ ನಿಯಮಾವಳಿಗಳ ಪಟ್ಟಿಯನ್ನು ರಚನೆಮಾಡಿಟ್ಟುಕೊಳ್ಳಬೇಕು. ಇದರ ಜೊತೆಗೆ, ನಾಚಿಕೆ ಅಥವಾ ಸಂಕೋಚ ಸ್ವಭಾವದ ಮಕ್ಕಳನ್ನು ಉತ್ತೇಜಿಸುವಂತಹ ಚಟುವಟಿಕೆಗಳನ್ನೂ ತಯಾರಾಗಿಟ್ಟುಕೊಳ್ಳಬೇಕು.
- ಮಕ್ಕಳು, ಸಂದರ್ಶನದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಸಾಧ್ಯವಾಗುವಂತೆ, ಬದಲಿ ಚಟುವಟಿಕೆಗಳಾದ ಚಿತ್ರ ಬಿಡಿಸುವುದು, ಬರೆಯುವುದು, ದಿನಚರಿ ಪುಸ್ತಕ ಇಟ್ಟುಕೊಳ್ಳುವುದು, ಧ್ವನಿಮುದ್ರಿಕೆಗಳ ಉಪಯೋಗ, ಭಾವಚಿತ್ರ ತೆಗೆಯುವುದು, ವೀಡಿಯೋ ತುಣುಕುಗಳ ಉಪಯೋಗ, ವಿವಿಧ ಚಿತ್ರಗಳ, ಘಟನಾವಳಿಗಳ, ಭೂಪಟಗಳ ಉಪಯೋಗ ಅಥವಾ ದೃಶ್ಯಗಳ ಮೂಲಕ ವಿಷಯಗಳನ್ನು ಬಯಲಿಗೆಳೆಯುವ ಇತರ ಮಾರ್ಗೋಪಾಯಗಳನ್ನು ಪರಿಗಣಿಸಿಕೊಳ್ಳಬೇಕು.
- ಚಿತ್ರ ಬಿಡಿಸುವ ಅಥವಾ ಇತರ ಸೃಜನಾತ್ಮಕ ಚಟುವಟಿಕೆಗಳನ್ನು ಆಯೋಜಿಸುವಾಗ, ಭವಿಷ್ಯದಲ್ಲಿ ಈ ಉತ್ಪನ್ನಗಳಿಂದ ಏನು ಮಾಡಲು ಸಾಧ್ಯ ಎಂಬುದನ್ನು ಗಮನದಲ್ಲಿಟ್ಟುಕೊಂಡು, ಅದಕ್ಕೆ ಸರಿಯಾಗಿ ದಟ್ಟವಾಗಿ ಬರೆಯುವ ಲೇಖನಿ ಹಾಗೂ ಸರಿಯಾದ ಹಾಳೆಗಳನ್ನು ಬಳಸಿಕೊಳ್ಳಬೇಕು. ಸಂದರ್ಶನ ನಡೆಸುವ ಕೋಣೆಯನ್ನು

ಸರಿಯಾಗಿ ಪರಿಶೀಲಿಸಿಕೊಳ್ಳಬೇಕು.

- ಧ್ವನಿ ಅಥವಾ ದೃಶ್ಯ ಮುದ್ರಣ ಸಲಕರಣೆಗಳನ್ನು ಮಕ್ಕಳು ಬರುವ ಮುನ್ನವೇ ಜೋಡಿಸಿ ಇಟ್ಟುಕೊಳ್ಳಬೇಕು.

ಸಂದರ್ಶನದ ಮಧ್ಯದಲ್ಲಿ:

- ಮಕ್ಕಳನ್ನು ಅವರ ಹೆಸರು ಹಿಡಿದು ಸಂಬೋಧಿಸಬೇಕು.
- ಮಕ್ಕಳಿಗೆ ಈ ಸಂದರ್ಶನದ ಉದ್ದೇಶವನ್ನು ನೆನಪಿಸಿಕೊಡಬೇಕು ಹಾಗೂ ಈ ಸಂದರ್ಶನವು ಹೇಗೆ ವಿನ್ಯಾಸಗೊಳಿಸಲ್ಪಟ್ಟಿದೆ ಎಂದು ತಿಳಿಯಪಡಿಸಬೇಕು.
- ಮುಕ್ತ ಪ್ರಶ್ನೆಗಳನ್ನು ಕೇಳಬೇಕು.
- ಪ್ರಶ್ನೆಗಳನ್ನು ಕೇಳಲು ಹಾಗೂ ನಿರ್ದೇಶನಗಳನ್ನು ಕೊಡಲು ಸ್ಪಷ್ಟವಾದ ಹಾಗೂ ಸರಳವಾದ ಭಾಷೆಯನ್ನು ಉಪಯೋಗಿಸಬೇಕು.
- ಸಾಧ್ಯವಾದಾಗಲೆಲ್ಲಾ, ಮಕ್ಕಳೇ ಮುಂದಾಳತ್ವ ವಹಿಸಲು ಅವಕಾಶ ಮಾಡಿಕೊಡಬೇಕು.
- ನೈಜವಾಗಿ ಅನುಭೂತಿಯನ್ನು ಪ್ರದರ್ಶಿಸಬೇಕು.
- ಮಕ್ಕಳನ್ನು ಗೌರವದಿಂದ ನಡೆಸಿಕೊಳ್ಳಬೇಕು. ಆದರೆ, ಮಕ್ಕಳು ಮತ್ತು ಹದಿಹರೆಯದವರ ವರ್ತನೆಗಳನ್ನು ಮುಂಚಿತವಾಗಿ ತಿಳಿದುಕೊಳ್ಳುವುದು ಅಸಾಧ್ಯ ಎಂದು ನೆನಪಿಟ್ಟುಕೊಳ್ಳಬೇಕು.
-

ಮುದ್ರಣ ಸಲಕರಣೆಗಳನ್ನು ಎದುರಿನಲ್ಲಿ ಮೇಜಿನ ಮೇಲೆ ಇಟ್ಟುಕೊಳ್ಳದೆ, ಒಂದು ಪುಸ್ತಕದ ಮೇಲೆ ಇರಿಸಿಕೊಳ್ಳಬೇಕು,

- ತಿನಿಸುಗಳನ್ನು ಕೊಡುವುದಿದ್ದರೆ, ಸದ್ದು ಉಂಟುಮಾಡುವ ಪೊಟ್ಟಣಗಳನ್ನು ದೂರವಿಡಬೇಕು.

ಸಂದರ್ಶನದ ನಂತರ:

- ಕಾಲ್ಪನಿಕ ಹೆಸರುಗಳನ್ನು ಕೊಟ್ಟು ಎಲ್ಲಾ ಧ್ವನಿಸುರುಳಿಗಳನ್ನು, ಚಿತ್ರಗಳನ್ನು, ಮತ್ತು ಇತರ ಸಾಮಗ್ರಿಗಳನ್ನು ಹೆಸರಿಸಿ ಇಡಬೇಕು.
- ಸಂದರ್ಶನ ಮುಗಿದ ತಕ್ಷಣ ಅದನ್ನು ಇನ್ನೊಂದು ನಕಲು ಮಾಡಿ ಇಡಬೇಕು ಮತ್ತು ಮುಖ್ಯ ಮಾಹಿತಿಗಳಾದ ಮಕ್ಕಳ ಮತ್ತು ಸಂಶೋಧಕನ ನಿಲುವು, ವರ್ತನೆ, ಗ್ರಹಣ ಸಾಮರ್ಥ್ಯ ಹಾಗೂ ಇನ್ನಿತರ ಯುಕ್ತ ಮಾಹಿತಿಗಳಾದ ಅಡಚಣೆ ಇತ್ಯಾದಿಗಳನ್ನು ದಾಖಲಿಸಿಕೊಳ್ಳಬೇಕು.
- ನಿಯಮಾವಳಿಯನ್ನು ಅಗತವಿದ್ದರೆ ಪರಿಷ್ಕರಿಸಬಹುದು

ಚಿತ್ರ 6.3 ಮಕ್ಕಳೊಡನೆ ಮತ್ತು ಹದಿಹರೆಯದವರೊಡನೆ ಯಶಸ್ವೀ ಸಂದರ್ಶನಕ್ಕೆ ಅವಶ್ಯಕವಾದ ಸಲಹೆಗಳು.

**ಮೌಖಿಕ ಉತ್ತರಗಳನ್ನು ಹೊರತರುವ ಮಾರ್ಗೋಪಾಯಗಳು (Strategies for eliciting verbal responses)**

ಹಲವು ಚಟುವಟಿಕೆಗಳ ಸುತ್ತ ಹೆಣೆದ ಸಂದರ್ಶನಗಳು ಮಕ್ಕಳೊಡನೆ ಹೆಚ್ಚು ಚೆನ್ನಾಗಿ ಕೆಲಸ ಮಾಡುತ್ತವೆ (ಗ್ರೇ ಮತ್ತು ವಾಲ್ಶ್; ಮೌತ್ನರ್ (Graue & Walsh, 1998; Mauthner, 1997). ಇಂತಹ ಚಟುವಟಿಕೆಗಳು ಏಕತಾನತೆಯನ್ನು ತಡೆದು, ಮಕ್ಕಳನ್ನು ಸಂದರ್ಶನದಲ್ಲಿ ಭಾಗವಹಿಸುವಂತೆ ಮಾಡುತ್ತವೆ; ಪ್ರತಿಯೊಂದು ಚಟುವಟಿಕೆಯೂ ಒಂದು ಹೊಸ ಕೇಂದ್ರಬಿಂದುವಾಗಬಹುದು ಅಥವಾ ಅಂತಹದೇ ಪ್ರಶ್ನೆಗಳನ್ನು ಕೇಳುವ ಇನ್ನೊಂದು ವಿಧಾನವಾಗಬಹುದು. ಉತ್ತರಿಸಲು ಒಂದು ನಿಗದಿತವಾದುದು ಇದ್ದಾಗ ಮಕ್ಕಳಿಗೆ ಸಂಶೋಧನಾ ವಿಷಯಕ್ಕೆ ಸಂಬಂಧ ಕಲ್ಪಿಸಲು ಸುಲಭವಾಗುತ್ತದೆ.

ಉದಾಹರಣೆಗೆ, ತರಗತಿಯಲ್ಲಿ ಮಕ್ಕಳ ಸಾಮಾಜಿಕ ಒಡನಾಟದ ಬಗ್ಗೆ ಅವರಿಗಿರುವ ತಿಳುವಳಿಕೆಯನ್ನು ತಿಳಿಯಲು, ಮಕ್ಕಳು ತರಗತಿಯಲ್ಲಿರುವ ಚಿತ್ರಗಳು ತುಂಬಾ ಸಹಕಾರಿಯಾಗಬಲ್ಲುದು. ಸಂಶೋಧಕನು ಭಾವಚಿತ್ರಗಳನ್ನು ಮೇಜಿನ ಮೇಲೆ ಓರಣವಾಗಿಟ್ಟು, ನಂತರ ಮೇರಿಯ ಭಾವಚಿತ್ರವನ್ನು ಎತ್ತಿಕೊಂಡು, "ಮೇರಿಯು ಕಲಾ ಮೇಜಿನ ಬಳಿಯಲ್ಲಿ ಕೆಲಸ ಮಾಡುತ್ತಿದ್ದರೆ, ಬೇರೆ ಮಕ್ಕಳು ಬಂದು ಅವಳೊಡನೆ ಏನು ಮಾಡುತ್ತಾರೆ?" ಎಂದು ಕೇಳಬಹುದು. (ಗ್ರೇ ಮತ್ತು ವಾಲ್ಶ್, 1998. ಪು. 114-115)

ಮಕ್ಕಳ ಸಂದರ್ಶನಗಳಲ್ಲಿ ಪ್ರಚೋದಿಸುವ ವಸ್ತುಗಳ ಬಳಕೆ ಹೊಸತೇನಲ್ಲ. ಮಕ್ಕಳ ಆಪ್ತಸಲಹೆಗಾರರು ಹಾಗೂ ಮಕ್ಕಳ ಜೊತೆ ಕೆಲಸ ಮಾಡುವ ಚಿಕಿತ್ಸಕರು ಇವುಗಳನ್ನು ಬಹಳ ವರ್ಷಗಳಿಂದ ಉಪಯೋಗಿಸುತ್ತಿದ್ದಾರೆ. ಗೊಂಬೆಗಳು, ಆಟಿಕೆಗಳು ಮತ್ತು ತೊಗಲುಗೊಂಬೆಗಳನ್ನು, ಶಿಶು ದೌರ್ಜನ್ಯದ ಶಂಕೆಯ ಬಗ್ಗೆ ವಿಷಯ ತಿಳಿಯಲು, ಮಕ್ಕಳಿಗೆ ಅವರ ಭಾವನೆಗಳನ್ನು ಪುನಃ ಪ್ರದರ್ಶಿಸಲು, ಅಥವಾ ಅದರ ಬಗ್ಗೆ ಒಂದು ಕಥೆ ಹೇಳಲು ಉಪಯೋಗಿಸಲ್ಪಡುತ್ತಿತ್ತು (ಬ್ರೂಕರ್, 2001). ಮಕ್ಕಳು ಮತ್ತು ಹದಿಹರೆಯದವರು ತಮ್ಮ ದೈನಂದಿನ ಅನುಭವಗಳನ್ನು ಹಂಚಿಕೊಳ್ಳುವುದನ್ನು ಸಾಧ್ಯವಾಗಿಸಲು, ಇತ್ತೀಚೆಗೆ ಸಂಶೋಧಕರು ವಿಧ ವಿಧವಾದ ವಿಷಯ ಹೊರತೆಗೆಯುವ ಪರಿಕರಗಳನ್ನು ಬಳಸುತ್ತಿದ್ದಾರೆ. ಮಕ್ಕಳ ಜೀವನದ ಅನುಭವಗಳನ್ನು ಹೊರತೆಗೆಯಲು, ಸಂಶೋಧಕರು ಈ ಕೆಳಗಿನ ಬೇರೆ ಬೇರೆ ವಿಧಾನಗಳನ್ನು ಅನುಸರಿಸುತ್ತಾರೆ:

- ಅಸ್ತಮಾದೊಂದಿಗೆ ಜೀವನ ನಡೆಸುವ ಸನ್ನಿವೇಶದ ಪಾತ್ರಾಭಿನಯ (ಎಂ. ಮೋರ್ಗನ್ ಮತ್ತಿತರರು, 2002).
- ನಿಜ ಜೀವನದ ವಿಷಯಗಳ ನಾಟಕೀಯ ದೃಶ್ಯಗಳನ್ನು ಸೃಷ್ಟಿಸಿ ಅವುಗಳನ್ನು ನಟಿಸುವುದು (ವೀಲೆ, 2005).
- "ಹದಿಹರೆಯದವರು ತಮ್ಮ ಸಮಸ್ಯೆಗಳನ್ನು ಹೇಗೆ ನಿಭಾಯಿಸುತ್ತಾರೆ ಮತ್ತು ಅವರ ಸಮಸ್ಯೆಗಳಿಗೆ ವಯಸ್ಕರ ಪ್ರತಿಕ್ರಿಯೆಗಳನ್ನು ಅವರು ಏನೆಂದು ಗ್ರಹಿಸುತ್ತಾರೆ ಎಂಬ ವಿಷಯ ಮುಂದುವರಿಸಲು ಬೇಕಾದ ಒಂದು 'ಚಿಮ್ಮು ಹಲಗೆ'ಯಂತೆ (ಉತ್ತೇಜಕದಂತೆ) ದೂರದರ್ಶನದ ಕಾರ್ಯಕ್ರಮದ ಒಂದು ತುಣುಕನ್ನು ವೀಕ್ಷಿಸಿ ಅದಕ್ಕೆ ಪ್ರತಿಕ್ರಿಯಿಸುವಂತೆ ಮಾಡುವುದು" (ಪಂಚ್ ,2002ಎ, ಪು. 51).
- ಹಿಂದಿನ ವರ್ಷಗಳಲ್ಲಿ ನಡೆದ ಹಿಂಸಾಕೃತ್ಯಗಳನ್ನು ಗುರುತಿಸಲು ಶಾಲೆಯ ಒಳಾಂಗಣದ ನೀಲಿನಕ್ಷೆಯನ್ನು ಬಳಸಿಕೊಳ್ಳುವುದು ಮತ್ತು ಇವುಗಳನ್ನು ಒಡನಾಡಿಗಳೊಡನೆ ನಡೆಸುವ ಕೇಂದ್ರೀಕೃತ ಸಮೂಹ ಚರ್ಚೆಯ

ವಿಷಯವಾಗಿ ಬಳಸಿಕೊಳ್ಳುವುದು (ಆಸ್ಟರ್, ಮೆಯೆರ್ ಮತ್ತು ಬೆಹ್ರೆ, 1999. · "ಜೇಬಿನಲ್ಲಿಟ್ಟುಕೊಳ್ಳಬಹುದಾದ ನಿರ್ಧಾರದ ಪಟ್ಟಿ"ಯಲ್ಲಿ ತಮ್ಮ ಜೀವನದಲ್ಲಿ ತೆಗೆದುಕೊಂಡ ಮುಖ್ಯ ನಿರ್ಧಾರಗಳನ್ನು ಹಾಗೂ ಅವುಗಳಿಗೆ ಸಹಕರಿಸಿದವರನ್ನು ಗುರುತಿಸಿಕೊಳ್ಳುವುದು (ಥಾಮಸ್ ಮತ್ತು ಒ' ಕೆನೆ, 1998).

ನಾವು, ಕೊಟ್ಟಿರುವ ವಾಕ್ಯ ಪೂರ್ಣಗೊಳಿಸುವಂತೆ ಸಂದರ್ಶನದ ಪ್ರಶ್ನೆಗಳನ್ನು ರಚಿಸಿದೆವು, ಇದರಲ್ಲಿ ಮಕ್ಕಳು, ಪ್ರಶ್ನೆಗಳಲ್ಲಿ ಒಂದನ್ನು ಟೋಪಿಯಿಂದ ಆರಿಸಿ, ಗಟ್ಟಿಯಾಗಿ ಓದಿ ನಂತರ ಅದನ್ನು ಪೂರ್ಣಗೊಳಿಸಬೇಕು. ನಾವು ಇದನ್ನು ಪ್ರಾಮಾಣಿಕತೆಯ ಆಟ ಎಂದು ಕರೆದೆವು, ಏಕೆಂದರೆ, ನಾವು ಮಕ್ಕಳಿಗೆ, ನೀವು ಪ್ರಶ್ನೆಗಳನ್ನು ಅತ್ಯಂತ ಪ್ರಾಮಾಣಿಕತೆಯಿಂದ ಉತ್ತರಿಸುವುದೇ ಇದರ ಉದ್ದೇಶ ಎಂದು ಹೇಳಿದ್ದೆವು. ಈ ಆಟವು ಮುಕ್ತ ಪ್ರಶ್ನೆಯಂತೆಯೇ ಕೆಲಸ ಮಾಡಿದರೂ, ಇಲ್ಲಿ ಟೋಪಿಯೊಳಗಿಂದ ಒಂದು ಪ್ರಶ್ನೆಯನ್ನು ಆರಿಸಿಕೊಂಡು, ಅದನ್ನು ಕೈಯಲ್ಲಿ ಹಿಡಿದುಕೊಳ್ಳುವ ಕ್ರಿಯೆಯು, ಅವರಿಗೆ ಉತ್ತರಿಸಲು ಪ್ರಚೋದಕವಾಯಿತು. ಆದರೆ, ಅದು ಒಂದು ಮೌಖಿಕ ಪ್ರಶ್ನೆಯಾಗಿದ್ದರೆ ಅವರು ಉತ್ತರಿಸುತ್ತಿರಲಿಲ್ಲ. ಇದರಲ್ಲಿ ಮಕ್ಕಳಿಗೆ ಪ್ರಶ್ನೆಯನ್ನು ಉರುಹಾಕಿ ನೆನಪಿಟ್ಟುಕೊಳ್ಳಬೇಕಾಗಿರಲಿಲ್ಲ, ಮತ್ತು ಅವರು ಟೇಪ್ ರೆಕಾರ್ಡರನ್ನು ಒಬ್ಬರಿಂದೊಬ್ಬರಿಗೆ ಕೊಡುತ್ತಾ ಅದರಲ್ಲಿ ಮಾತನಾಡುವುದರಲ್ಲಿ ಆನಂದಪಟ್ಟರು. ನಾವು ಈ ವಿಧಾನವನ್ನು ಮೊದಲು ಬಳಸಿದಾಗ, ಒಬ್ಬರಿಗಿಂತ ಹೆಚ್ಚು ವಿದ್ಯಾರ್ಥಿಗಳು ಒಂದು ಬಾರಿಗೆ ಈ ಅಪೂರ್ಣ ವಾಕ್ಯವನ್ನು ಪೂರ್ಣಗೊಳಿಸಬಹುದೆಂದು ಅವರು ಸೂಚಿಸಿದರು. ಈ ವಿಧಾನವು, ಮಕ್ಕಳಿಗೆ ಸಂದರ್ಶನದ ಸನ್ನಿವೇಶವನ್ನು ವ್ಯಾಖ್ಯಾನಿಸುವುದರಲ್ಲಿ ಮುಖ್ಯಪಾತ್ರ ವಹಿಸಲು ಅವಕಾಶ ಮಾಡಿಕೊಟ್ಟಿತು, ಮತ್ತು ಅದು ನಮಗೆ ಹೇರಳವಾದ, ಹಾಗೂ ಸಂಕೀರ್ಣವಾದ ಮಾಹಿತಿಯನ್ನು ಕೊಟ್ಟಿತು. ಆದ್ದರಿಂದ ತಕ್ಷಣ ಈ ವಿಧಾನವನ್ನು ನಾವು ಸೇರಿಸಿಕೊಂಡೆವು. ನಾವು ಈ ಒಡನಾಟವನ್ನು, ಅವಕಾಶ ಸಿಕ್ಕಿದಾಗ, ಬೇರೆ ವಿಷಯಗಳ ಬಗ್ಗೆ ಶೋಧನೆ ಮಾಡಲು ಬಳಸಿಕೊಂಡೆವು. ಇದನ್ನು ನಾವು ಈ ಕೆಳಗಿನ ನಾಲ್ಕನೆ ತರಗತಿಯ ಮಕ್ಕಳ ಸಮೂಹ ಸಂದರ್ಶನದ ಉದಾಹರಣೆಯಿಂದ ಅರ್ಥಮಾಡಿಕೊಳ್ಳಬಹುದು.

ಜೇಕ್: ಆಂಗ್ಲ ಭಾಷಾ ಪರೀಕ್ಷೆಯಲ್ಲಿ . . . ಅನುತ್ತೀರ್ಣರಾದ ಮಕ್ಕಳು ಆ ತರಗತಿಯನ್ನು ಪುನರಾವರ್ತಿಸಬೇಕು.

ಟ್ರೇಸೀ: ಆಂಗ್ಲ ಭಾಷಾ ಪರೀಕ್ಷೆಯಲ್ಲಿ . . . ಅನುತ್ತೀರ್ಣರಾದ ಮಕ್ಕಳು ಸರಿಯಾಗಿ ಗಮನ ಕೊಡಲಿಲ್ಲ ಮತ್ತು ಅವರು ಮಾಡಬೇಕಾದ್ದನ್ನು ಸರಿಯಾಗಿ ಮಾಡಲಿಲ್ಲ.

ಡಾಫ್ನೆ: ಆಂಗ್ಲ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ಮಕ್ಕಳು ಶಿಕ್ಷಕರು ಕಲಿಸಿದ ತಂತ್ರಗಳನ್ನು ಆಲೋಚಿಸಲಿಲ್ಲ.

ಸಂಶೋಧಕ: ನೀವು ಅಂತಹ ಒಂದು ತಂತ್ರವನ್ನು ಯೋಚಿಸಿ ಹೇಳಬಹುದೇ?

(ಮಕ್ಕಳು ನಮಗೆ ತಂತ್ರ ವಿಧಾನಗಳ ಕಲ್ಪನೆಯ ಬಗ್ಗೆ ತಿಳಿಸಿಕೊಟ್ಟರು. ಅಂದರೆ, ಪರೀಕ್ಷಕರು ಪರೀಕ್ಷಾ ತಯಾರಿಯಲ್ಲಿ ಬಳಸುವ ತಂತ್ರಗಳನ್ನು ಹಾಗೂ ಮಕ್ಕಳು ಪರೀಕ್ಷೆಯಲ್ಲಿ ಉತ್ತಮವಾಗಿ ಮಾಡುವ ತಂತ್ರಗಳ ಬಗ್ಗೆ ತಿಳಿಸಿಕೊಟ್ಟರು.)

ಡಾಫ್ನೆ: ನಾವು ಪ್ರಶ್ನೆಗಳನ್ನು ಬಹಳ ಜಾಗರೂಕತೆಯಿಂದ ಓದಬೇಕು.

ಅಲೆಕ್ಸ: ಒಂದು ಉತ್ತರವು ಸರಿಯೆನಿಸಿದರೂ, ಪುನಃ ಹಿಂದಕ್ಕೆ ಹೋಗಿ ಇತರ ಉತ್ತರಗಳನ್ನು ಓದಬೇಕು.

ಫೇಥ್: ಉತ್ತರಗಳನ್ನು ಬಹಳ ಜಾಗರೂಕತೆಯಿಂದ ಬರೆಯಬೇಕು.

## ಚಿತ್ರ–ಪ್ರಚೋದಿತ ವಿಧಾನಗಳು: (Stimulus Drawing Approaches):

ಕಲಾಚಿಕಿತ್ಸೆ ಹಾಗೂ ಚಿಕಿತ್ಸಾತ್ಮಕ ಆಪ್ತ ಸಲಹೆಗಳಲ್ಲಿ ಉತ್ತರಗಳನ್ನು ಪಡೆಯಲು, ಆಕೃತಿ ಅಥವಾ ಚಿತ್ರಗಳನ್ನು ಬಹಳ ಕಾಲದಿಂದಲೂ ಉಪಯೋಗಿಸುತ್ತಿದ್ದಾರೆ. ಪ್ರಖ್ಯಾತವಾದ, ರೋಶಾಕ್ ಮಸಿಮಚ್ಚೆ ಪರೀಕ್ಷೆ (Rorschach inkblot test) – ಇದು ಜನರ ತರ್ತ್‌ಕ್ಷಣದ ಮುಕ್ತಸಹಚಯವು ಅವರ ಸಂವೇಗ ಮತ್ತು ಉಪಪ್ರಜ್ಞೆಯ ಒಳಗೆ ಹೋಗಲು ದಾರಿ ಮಾಡಿ ಕೊಡುತ್ತದೆ ಎಂಬ ತತ್ವದ ಆಧಾರದ ಮೇಲೆ ಮಾಡಲಾಗಿದೆ. ಇಂತಹ ಪರೀಕ್ಷೆಗಳು "ಪ್ರಚೋದಕ ಪರೀಕ್ಷೆಗಳು" ಎಂದು ಪರಿಚಿತವಾಗಿವೆ. ಮಕ್ಕಳ ಜೊತೆ ಸಂಶೋಧನೆ ಮಾಡುವಾಗ, ಇಂತಹ ಪರೀಕ್ಷೆಗಳು ಪ್ರಚೋದಕ ಹಾಗೂ ಪ್ರತಿಕ್ರಿಯೆಗಳ ಸಂಯೋಗವಾಗಿ ರೂಪುಗೊಂಡಿವೆ, ಮತ್ತು ಇವು ರೋಗಿ-ಚಿಕಿತ್ಸಕರ ನಡುವೆ ಹೆಚ್ಚಿನ ಒಡನಾಟದ ಕೊಡು–ಕೊಳ್ಳುವಿಕೆಗೆ (ಅಂದರೆ ಹೆಚ್ಚಿನ ಪ್ರತಿಕ್ರಿಯೆ ಪಡೆಯಲು) ಸಹಕಾರಿಯಾಗುತ್ತವೆ. ಉದಾಹರಣೆಗೆ, "ಒಂದು ಚಿತ್ರ ಕಥೆ ಬರೆಯಿರಿ" – ಈ ಪರೀಕ್ಷೆಯು, 14 ವಿವಿಧ ಸನ್ನಿವೇಶಗಳನ್ನು ಚಿತ್ರಿಸುವ ಪ್ರಚೋದಕ ಕಾರ್ಡುಗಳನ್ನು ಕೊಡುವುದರೊಂದಿಗೆ ಆರಂಭವಾಗುತ್ತದೆ. ಯಾವುದಾದರೂ ಎರಡು ಕಾರ್ಡುಗಳನ್ನು ಆಯ್ಕೆ ಮಾಡಲು ಮಗುವಿಗೆ ಸೂಚಿಸಲಾಗುತ್ತದೆ, ನಂತರ, ಆ ಎರಡು ಚಿತ್ರಗಳ ವಸ್ತುವಿನ ಆಧಾರದ ಮೇಲೆ ಚಿತ್ರ ಬರೆದು, ಒಂದು ಕಥೆಯನ್ನು ಹೇಳಲು ಸೂಚಿಸಲಾಗುತ್ತದೆ. ಆ ಉತ್ತರಗಳ ಸಂವೇಗಾತ್ಮಕ ವಸ್ತುವನ್ನು ಪೂರ್ವನಿರ್ಧಾರಿತ ಮಾನದಂಡದಿಂದ ಪರಿಶೀಲಿಸಲಾಗುತ್ತದೆ. "ಚಿತ್ರ ಪ್ರಚೋದಿತ ಪರೀಕ್ಷಾ ವಿಧಾನದಲ್ಲಿ ಚಿತ್ರವು, ಪದಗಳ ಸ್ಥಾನದಲ್ಲಿ ಅಭಿಪ್ರಾಯಗಳನ್ನು, ವಿಚಾರಗಳನ್ನು ಸ್ವೀಕರಿಸುವ ಮತ್ತು ವ್ಯಕ್ತಪಡಿಸುವ ಮುಖ್ಯ ಮಾರ್ಗವಾಗುತ್ತದೆ (ಸಿಲ್ವರ್, 2001 ಪು. 16).

ಸಮಾಜ ವಿಜ್ಞಾನದ ಸಂಶೋಧನೆಗಳಲ್ಲಿ, ಭಾಗವಹಿಸುವವರಿಂದ ಬರೆಯಲ್ಪಟ್ಟ ಚಿತ್ರಗಳೇ, ಅಲ್ಲಿ ಉಪಯೋಗಿಸುವ ಚಿತ್ರಗಳಾಗಿರುತ್ತವೆ. ಮೇಲೆ ಹೇಳಿದ, ಸಿಲ್ವರ್‌ನ ಪ್ರಚೋದಕ ಪರೀಕ್ಷಾ ವಿಧಾನಗಳನ್ನು, ಮನಃಶಾಸ್ತ್ರ ಮತ್ತು ಸಮಾಜ ಸೇವಾ ಶಾಸ್ತ್ರದ ಕ್ಷೇತ್ರಗಳಲ್ಲಿ ಮಕ್ಕಳ ಜೊತೆ ಕೆಲಸ ಮಾಡುವಾಗ ಈಗಲೂ ಬಹಳವಾಗಿ ಉಪಯೋಗಿಸುತ್ತಿದ್ದಾರೆ. ಆದರೆ ಈ ಪುಸ್ತಕದಲ್ಲಿ ಈ ವಿಧಾನಗಳನ್ನು ಬೆಂಬಲಿಸಿಲ್ಲ. ಒಂದು ಸಾಮಾಜಿಕ ರಚನಾತ್ಮಕ ವಿಧಾನವು ಆಸಕ್ತ ವಿಷಯವನ್ನು ಸಹ ರಚನೆ ಮಾಡಿ ಅದರ ಅರ್ಥವನ್ನು ತಿಳಿದುಕೊಳ್ಳಲು ಕಲ್ಪನಾರೂಪಗಳನ್ನು ದೃಶ್ಯಸಂಪನ್ಮೂಲವಾಗಿ ನೋಡುತ್ತದೆ. ಸಂಶೋಧಕರು, ಈ ರೀತಿ ಬೇರೆ ಬೇರೆ ಆಯ್ಕೆಗಳನ್ನು ಪರಿಗಣಿಸುವಾಗ, ಅವರು ಮಕ್ಕಳ ಸಂವೇಗಾತ್ಮಕ ಮತ್ತು ಸಂಜ್ಞಾನಾತ್ಮಕ ಜೀವನವನ್ನು ಹೊರತೆಗೆಯಲು, ರೇಖಾಕೃತಿಗಳನ್ನು ಬಳಸುವುದು ಅಸಾಮಾನ್ಯವೇನಲ್ಲ. ಹಾಗೆಯೇ, ಕೆಲವು ವ್ಯಕ್ತಿಗಳ ಬಗ್ಗೆ ಮಕ್ಕಳ ಗ್ರಹಿಕೆ ಅಥವಾ ಅವರ ಜೊತೆಗಿನ ಸಂಬಂಧ ಅಥವಾ ಕೆಲವು ಚಟುವಟಿಕೆಗಳ ಬಗ್ಗೆ ಅವರ ಗ್ರಹಿಕೆಗಳನ್ನು ಅರ್ಥ ಮಾಡಿಕೊಳ್ಳಲು ಪ್ರಚೋದಕಗಳನ್ನು ವಿಂಗಡಿಸುವ ಕಾರ್ಯಗಳನ್ನು ಬಳಸಿಕೊಳ್ಳುತ್ತಾರೆ. ಇದಲ್ಲದೆ, ಕೆಲವು ನಿಗದಿತ ಘಟನೆಗಳ ಬಗ್ಗೆ ತಿಳಿದುಕೊಳ್ಳಲು ಬರವಣಿಗೆಯ ಕಾರ್ಯ, ಹಾಗೂ ಅವರ ಅನುಭವಗಳನ್ನು ತಿಳಿದುಕೊಳ್ಳಲು ಮುಕ್ತ ಪ್ರಶ್ನೆಗಳನ್ನೊಳಗೊಂಡ ಸಂದರ್ಶನಗಳನ್ನು ಬಳಸಿಕೊಳ್ಳುವುದು ಸಾಮಾನ್ಯವಾಗಿವೆ.

## ಛಾಯಾಚಿತ್ರ – ಪ್ರಚೋದಿತ ಸಂದರ್ಶನ (Photoelicitation Interview):

ಛಾಯಾಚಿತ್ರ ಉಪಯೋಗಿಸುವುದು ಅಂತಹ ಒಂದು ತಂತ್ರ. ಛಾಯಾಚಿತ್ರ ಪ್ರಚೋದಿತ ಸಂದರ್ಶನವು ಕೇವಲ ಹೆಚ್ಚಿನ ವಿಷಯ ಸಂಗ್ರಹಣೆಗಾಗಿ ಮಾತ್ರವಲ್ಲ, ಜೊತೆಗೆ "ಬೇರೆ ರೀತಿಯ ವಿಷಯಗಳನ್ನು ಹೊರತರುವ ಒಂದು ವಿಧಾನ" (ಹಾರ್ಪರ್, 2002 ಪು. 13). ಅಮೆರಿಕಾದ ಛಾಯಾಚಿತ್ರಕಾರರಾದ ಜಾನ್ ಕೊಲ್ಲಿಯರ್ ಜೂ. (1913 –1992) ಅವರು 1950ರ ದಶಕದಲ್ಲಿ, ಕಾರ್ನೆಲ್ ವಿಶ್ವವಿದ್ಯಾಲಯದ ಸಂಶೋಧನಾ ತಂಡದ ಜೊತೆಗೆ, ಬದಲಾಗುತ್ತಿದ್ದ ಕೆನಡಾದ

ಸಮುದಾಯದವರ ಮಾನಸಿಕ ಆರೋಗ್ಯದ ಬಗ್ಗೆ ನಡೆಸುತ್ತಿದ್ದ ಅಧ್ಯಯನದಲ್ಲಿ ಕೆಲಸ ಮಾಡುತ್ತಿದ್ದಾಗ ಈ ರೀತಿ ಛಾಯಾಚಿತ್ರಗಳನ್ನು ಬಳಸಿದರು. ಕೊಲ್ಲಿಯರ್, 1957 ಅವರು ಗಮನಿಸಿರುವುದೇನೆಂದರೆ, ದೃಶ್ಯಸಂಕೇತಗಳ ಮನೋಚಿತ್ರಣಗಳು "ಮಾಹಿತಿದಾರನ ಮೇಲೆ, ಅವನ ಸುಪ್ತ ಸ್ಮೃತಿಯನ್ನು ಉತ್ತೇಜಿಸುವಂತಹ ಸಾಮರ್ಥ್ಯದ ಮೂಲಕ ಅವನನ್ನು ಪ್ರಚೋದಿಸಿ, ಅವನ ಜೀವನದ ಬಗ್ಗೆ ಸಂವೇಗಾತ್ಮಕ ಹೇಳಿಕೆಗಳನ್ನು ಕೊಡುವಂತೆ ಒತ್ತಡ ಹೇರುತ್ತವೆ." ಮಕ್ಕಳ ಸಂದರ್ಶನಗಳಲ್ಲಿ, ಛಾಯಾಚಿತ್ರಗಳನ್ನು ಉಪಯೋಗಿಸುವುದು, ಅವರೊಡನೆ ವಿಶ್ವಾಸದ ಸಂಬಂಧ ಬೆಳೆಸಲು ಸಹಕಾರಿಯಾಗುತ್ತದೆ ಹಾಗೂ ವಯಸ್ಕರೊಡನೆ ನಡೆಯುವ ವೈಯಕ್ತಿಕ ಸಂದರ್ಶನದ ಬಗ್ಗೆ ಅವರಲ್ಲಿರುವ ಪೂರ್ವಾಗ್ರಹಿತ ಭಾವನೆಗಳನ್ನು ಭೇದಿಸಲು ಸಹಕಾರಿಯಾಗುತ್ತದೆ (ಕಾಪೆಲ್ಲೋ, 2005; ಡೆಂಪ್ಸೆ ಮತ್ತು ಟಕರ್, 1994; ಮೌತ್ನರ್, 1997) ಅಥವಾ, ಕೊಲ್ಲಿಯರ್ನ ಮಾತುಗಳಲ್ಲಿ, ಹೇಳುವುದಾದರೆ, "ಎಚ್ಚರಿಕೆಯ ಉತ್ತರಗಳ ಪ್ರಶಾಂತತೆಯನ್ನು ಛಿದ್ರಗೊಳಿಸುವುದು" (1957, ಪು. 854). ಛಾಯಾಚಿತ್ರ ಪ್ರಚೋದಿತ ಸಂದರ್ಶನಗಳು ಮಕ್ಕಳೊಡನೆ ಪರಿಣಾಮಕಾರಿಯಾಗಿರುತ್ತವೆ, ಮತ್ತು ವಿವಿಧ ಸಂದರ್ಭಗಳಲ್ಲಿ, ವಿವಿಧ ಉದ್ದೇಶಗಳಿಗಾಗಿ ಉಪಯೋಗಿಸುತ್ತಿದ್ದಾರೆ: ವಿವಿಧ ವೃತ್ತಿಗಳ ಬಗ್ಗೆ 5–13 ವರ್ಷದ ಮಕ್ಕಳ ನಿಲುವು ಹಾಗೂ ನಂಬಿಕೆಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡಲು (ವೈನಿಗರ್, 1998); ನ್ಯೂನತೆಗಳ ಬಗ್ಗೆ ಅವರ ಅಭಿಪ್ರಾಯಗಳು (ಡೈಮಂಡ್, 1996), ಐತಿಹಾಸಿಕ ವಿಚಾರಗಳ ಚಿಂತನೆಗಳ ಬಗ್ಗೆ 3ನೇ, 5ನೇ, ಹಾಗೂ 9ನೇ ತರಗತಿಯ ಮಕ್ಕಳಲ್ಲಿ ಇರುವ ವ್ಯತ್ಯಾಸಗಳು (ಫೋಸ್ಟರ್, ಹೋಗ್ ಮತ್ತು ರೋಶ್, 1999)); ಮತ್ತು 14–18 ವರ್ಷದ ಮಹಿಳಾ ಆಟಗಾರ್ತಿಯರ ದೈಹಿಕ ಸ್ವಕಲ್ಪನೆಯ ಮೇಲೆ ಪತ್ರಿಕೆಗಳಲ್ಲಿನ ಸೌಂದರ್ಯದ ಚಿತ್ರದ ಪ್ರಭಾವ (ಹರ್ವರ್ಥ್, ಕ್ಲಾರ್ಕ್, ಮಾರ್ಟಿನ್ ಮತ್ತು ಥೋಂಪ್ಸನ್, 2005) ಇತ್ಯಾದಿ.

ಛಾಯಾಚಿತ್ರ ಪ್ರಚೋದಿತ ಸಂದರ್ಶನ ವಿಧಾನವನ್ನು ಬಳಸುವಾಗ ಈ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ: ಸಂಶೋಧನೆಯ ಉದ್ದೇಶಕ್ಕೆ ಅನುಗುಣವಾಗಿ ಛಾಯಾಚಿತ್ರಗಳನ್ನು ಆಯ್ಕೆ ಮಾಡಬೇಕು, ಅವುಗಳು ಸಂದರ್ಶನಾರ್ಥಿಗಳಿಗೆ ಅನ್ವಯವಾಗುತ್ತವೆಯೇ, ಹಾಗೂ ಅವರಿಗೆ ಸಂಬಂಧಿಸಿದಂತೆ ಅವುಗಳ ಪ್ರಾಮುಖ್ಯತೆ ಏನು ಎಂಬುದರ ಬಗ್ಗೆ ಸ್ವಲ್ಪ ಅಂದಾಜು ಇರಬೇಕು, ಮತ್ತು ದೊಡ್ಡಪ್ರಮಾಣದ ಸಂಶೋಧನಾ ವಿನ್ಯಾಸದೊಳಗೆ ಇಂತಹ ಸಂಶೋಧನೆಯ ಉದ್ದೇಶ ಏನು ಎಂದು ತಿಳಿದಿರಬೇಕು (ಅಂದರೆ, ಸಂಶೋಧಕನು ಗುರುತಿಸಿರುವ ಈ ಅಂತಃಸತ್ವವುಳ್ಳ ಮಹತ್ವದ ಸಂಶೋಧನಾ ವಿಷಯವನ್ನು ವಿಸ್ತರಿಸಲು, ಸಾಮರಸ್ಯ ಬೆಳೆಸಲು ಮತ್ತು ಒಂದು ಹೊಸ ಸಂದರ್ಶನದ ಪ್ರಾರಂಭದಲ್ಲಿ, ಭಾಗವಹಿಸುವವರು ವ್ಯಕ್ತಪಡಿಸುವ ಅಭಿಪ್ರಾಯಗಳನ್ನು ಕೂಲಂಕುಷವಾಗಿ ತಿಳಿಯಲು, ಮತ್ತು ಒಂದು ಛಾಯಾಚಿತ್ರದ ಆಧಾರಿತ ವಿಷಯಕ್ಕೆ ಗುಂಪಿನ ಪ್ರತಿಕ್ರಿಯೆಯನ್ನು ಹೊರತರಲು ಆಗುವಂತಿರಬೇಕು).

ಕಾಪೆಲ್ಲೋ 2005) ಅವರು, ದಕ್ಷಿಣ ಕ್ಯಾಲಿಫೋರ್ನಿಯಾ ನಗರದ ಪ್ರಾಥಮಿಕ ಶಾಲೆಯ, 6–9 ವರ್ಷದವರೆಗಿನ, ಸಣ್ಣ ವಯಸ್ಸಿನ ಮಕ್ಕಳ ಬರೆಯುವ ಅಭ್ಯಾಸದ ಬಗ್ಗೆ ವೈಯಕ್ತಿಕ ಛಾಯಾಚಿತ್ರ ಪ್ರಚೋದಿತ ಸಂದರ್ಶನವನ್ನು ನಡೆಸಿದರು. ಅವರು ಆ ಮಕ್ಕಳನ್ನು ತರಗತಿಯಲ್ಲಿ ಕೆಲವು ತಿಂಗಳುಗಳವರೆಗೆ ಗಮನಿಸಿದರು. ಅವರನ್ನು ವಿಧ್ಯುಕ್ತ ಹಾಗೂ ವಿಧ್ಯುಕ್ತವಲ್ಲದ ಸಂದರ್ಶನಕ್ಕೊಳಪಡಿಸಿದರು ಹಾಗೂ, ಆ ಮಕ್ಕಳ ಪ್ರಕಾರ ಶಾಲೆಯಲ್ಲಿ "ಮುಖ್ಯವಾದ ಬರವಣಿಗೆಗಳು" ಎಂದು ಅನಿಸಿದವುಗಳನ್ನು ಅವರು ಬಯಸಿದಾಗ ಕ್ಯಾಮರಾ ಉಪಯೋಗಿಸಿ ಚಿತ್ರ ತೆಗೆಯಲು ಆಹ್ವಾನಿಸಿದರು. ಮಕ್ಕಳ ಸಾಮಾಜಿಕ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬರವಣಿಗೆಯ ಪಾತ್ರ ಹಾಗೂ ಅವರ ಬರವಣಿಗೆಗಳ ಬಗ್ಗೆ ಮಕ್ಕಳು ತೆಗೆದುಕೊಂಡ ನಿರ್ಧಾರಗಳ ಬಗ್ಗೆ ತಿಳಿಯಲು ಅವರು ಆಸಕ್ತರಾಗಿದ್ದರು. ಪ್ರತಿಯೊಂದು ಛಾಯಾಚಿತ್ರ ಪ್ರಚೋದಿತ ಸಂದರ್ಶನಕ್ಕೆ ತಯಾರಿ ಮಾಡಿದಾಗ, ಅವರು ಆಯಾ ಮಗು ಹಾಗೂ ಆ ಮಗುವಿನ ಭಾವಚಿತ್ರಕ್ಕೆ ಒತ್ತು ಕೊಟ್ಟರು.

ಸಂಶೋಧನಾ ಸಂಚಿಯು ಬಹಳ ಹಂತಗಳ ತರಗತಿಯ ಬರವಣಿಗೆಯಲ್ಲಿ ಭಾಗವಹಿಸಿದ ಮಕ್ಕಳ ತದ್ರೂಪದಂತಿತ್ತು ಮತ್ತು ಆಸಕ್ತಿಗಳಿಗನುಗುಣವಾಗಿ ಚಿತ್ರಗಳನ್ನು ಒಳಗೊಂಡಿತ್ತು. . . . ಚಿತ್ರಗಳನ್ನು ಒಂದು ದೊಡ್ಡ ಹಾಳೆಯ ಕಟ್ಟಿನ ಒಳಗೆ ಜೋಡಿಸಲಾಗಿತ್ತು ಮತ್ತು ಮಕ್ಕಳಿಗೆ ಅವುಗಳನ್ನು ಸುಲಭವಾಗಿ ತೆಗೆದು ಜೋಡಿಸಲು ಅನುಕೂಲವಾಗುವಂತೆ ಅವುಗಳಿಗೆ ಹಿಡಿಪುಗಳನ್ನು ಜೋಡಿಸಲಾಗಿತ್ತು. 4 X 6 ಅಳತೆಯ ಸುಮಾರು ನೂರು ಚಿತ್ರಗಳನ್ನು ಸಂಚಿಯಲ್ಲಿ ಸೇರಿಸಲಾಗಿತ್ತು. ಸಂದರ್ಶನದ ನಂತರ ಸುಲಭವಾಗಿ ಜೋಡಿಸಲು ಅನುಕೂಲವಾಗುವಂತೆ ಎಲ್ಲಕ್ಕೂ ನಿಗದಿತ ಸಂಕೇತ ಹಾಗೂ ಕ್ರಮಾಂಕಗಳನ್ನು ಕೊಡಲಾಗಿತ್ತು. ಚಿತ್ರಗಳಿಗೆ ಶೀರ್ಷಿಕೆಗಳನ್ನು ಕೊಟ್ಟಿರಲಿಲ್ಲ, ಆದರೆ ಆ ಹಾಳೆಯ ಕಟ್ಟನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿತ್ತು: ಕೆಲಸದಲ್ಲಿ ತೊಡಗಿರುವ ಮಕ್ಕಳು, ಸಾರ್ವಜನಿಕ ಪ್ರದರ್ಶನಗಳು, ಮತ್ತು ಮಾಹಿತಿದಾರನಿಂದ ಮಾಡಲ್ಪಟ್ಟ ಚಿತ್ರಗಳು (ಕಾಪೆಲ್ಲೋ, 2005 ಪು. 174).

ಈ ಉದಾಹರಣೆಯಲ್ಲಿ, ಮಕ್ಕಳು ತಮ್ಮ ತಮ್ಮ ಚಿತ್ರವನ್ನು ಸಂದರ್ಶನಕ್ಕೆ ಮೊದಲು ನೋಡಿರಲಿಲ್ಲ ಹಾಗೂ ಆಯ್ಕೆ ಪ್ರಕ್ರಿಯೆಯಲ್ಲಿ ಭಾಗವಹಿಸಿರಲಿಲ್ಲ. ಬದಲಾಗಿ, ಕಾಪೆಲ್ಲೋ ಅವರು, ಮಕ್ಕಳು ತಾವೇ ತೆಗೆದ ಚಿತ್ರಗಳನ್ನು ಎತ್ತಿ ತೋರಿಸುವುದರೊಂದಿಗೆ ಪ್ರತಿ ಸಂದರ್ಶನವನ್ನು ಪ್ರಾರಂಭಿಸಿದರು, ಮತ್ತು ಈ ಮೂಲಕ ಮುಖ್ಯ ಹಾಗೂ ಮುಖ್ಯವಲ್ಲದ ಚಿತ್ರಗಳನ್ನು ಬೇರ್ಪಡಿಸಿ, ನಂತರ ಅವುಗಳ ಬಗ್ಗೆ ಮಾತನಾಡಲು ಹೇಳಿದರು.

ಸಂಶೋಧಕರು ಮಕ್ಕಳೊಂದಿಗಿನ ಅವರ ಕೆಲಸಗಳಲ್ಲಿ ಚಿತ್ರಗಳನ್ನು ಬೇರೆ–ಬೇರೆ ರೀತಿಯಲ್ಲಿ ಬಳಸಿಕೊಂಡಿದ್ದರೂ, ಇತ್ತೀಚೆಗಷ್ಟೇ ಅವರ ಗಮನವು, ಒಂದು ಚಿಕ್ಕ ಮಗು ಯಾವ ರೀತಿ ಈ ಮಾಧ್ಯಮವನ್ನು ಒಂದು ನಿಗದಿತ ಒಡನಾಟದಲ್ಲಿ, ತನ್ನ ಅನಿಸಿಕೆಯನ್ನು ವ್ಯಕ್ತಪಡಿಸಲು ಬಳಸಿಕೊಳ್ಳುತ್ತದೆಯಲ್ಲದೆ, ಬೆಳವಣಿಗೆಯ ಯಾವುದೇ ಅಂಶ ಅಥವಾ ಸ್ವರೂಪವನ್ನು "ಇದ್ದಂತೆಯೇ" ಹೇಳುವುದಕ್ಕಲ್ಲ ಎಂಬುದರ ಮೇಲೆ ಕೇಂದ್ರೀಕೃತವಾಗಿದೆ. ಅಧ್ಯಾಯ 7ರಲ್ಲಿ, ಸಂಶೋಧಕರು ಯಾವ ರೀತಿ ಕಲೆ ಹಾಗೂ ಛಾಯಾಗ್ರಹಣಗಳನ್ನು ಮಕ್ಕಳ ಸಂಶೋಧನೆಗಳಲ್ಲಿ ಬಳಸಿಕೊಳ್ಳಬಹುದು ಎಂದು ನೋಡೋಣ.

## ವೈಯಕ್ತಿಕ ಸಂದರ್ಶನಗಳು (Individual Interviews):

ವೈಯುಕ್ತಿಕ ಸಂದರ್ಶನಗಳು ವ್ಯಕ್ತಿಗೆ ಆದ್ಯತೆ ಕೊಡುತ್ತವೆ. ಈ ಸಂದರ್ಶನಗಳ ಸತ್ವವೆಂದರೆ, ಅವುಗಳು ಸಂಶೋಧನಕಾರರಿಗೆ ಪ್ರತಿಯೊಬ್ಬ ಸಂದರ್ಶನಾರ್ಥಿಗೆ ತಮ್ಮ ಪೂರ್ತಿ ಗಮನವನ್ನು ಕೊಡಲು ಎಡೆಮಾಡಿಕೊಡುತ್ತವೆ. ಇಲ್ಲಿರುವ ಸವಾಲೆಂದರೆ, ಈ ಮೊದಲೇ ಚರ್ಚಿಸಿದಂತೆ ಅವುಗಳು ಸಂಶೋಧಕ–ಸಂಶೋಧನೆಗೊಳಪಟ್ಟವರ ಸಂಬಂಧಕ್ಕೆ ಒತ್ತು ಕೊಡುತ್ತವೆ. ಬಹಳ ಸಂಶೋಧಕರು ಹಾಗಿದ್ದರೂ, ಸಂಶೋಧನಾ ಕೋಣೆಯನ್ನು ಆಟದ ಕೋಣೆಯ ರೀತಿಯಲ್ಲಿ ವ್ಯವಸ್ಥೆಗೊಳಿಸಿ, ಭಯವನ್ನುಂಟುಮಾಡದ, ತಮಾಷೆಯ ಚಟುವಟಿಕೆಯಲ್ಲಿ ಮಗುವು ತತ್‌ಕ್ಷಣವೇ ತೊಡಗುವಂತೆ ಮಾಡಿ ಆ ಮೂಲಕ ಯಶಸ್ವೀ ಸಂದರ್ಶನ ಮಾಡುವುದರ ಮೂಲಕ ಈ ಸವಾಲಿನ ಜೊತೆ ಕೆಲಸ ಮಾಡಿದ್ದಾರೆ.

ಕೆಲವು ಸೂಕ್ಷ್ಮ ಹಾಗೂ ವೈಯಕ್ತಿಕ ವಿಚಾರಗಳನ್ನು ತಿಳಿದುಕೊಳ್ಳಲು ಮತ್ತು ಅನುಭವದ ಅಥವಾ ವಿಷಯದ ಆಳಕ್ಕೆ ಇಳಿಯಲು, ಅಥವಾ ಪ್ರತಿ ಮಗುವೂ ಸಂಶೋಧನಾ ವಿಷಯವನ್ನು ಹೇಗೆ ಅರ್ಥಮಾಡಿಕೊಂಡಿದೆ, ಅಥವಾ ಆ

ವಿಷಯಗಳೊಡನೆ ಹೇಗೆ ತೊಡಗಿಸಿಕೊಳ್ಳುತ್ತದೆ ಎಂಬುದರ ಮೇಲೆ ಸಂದರ್ಶನವು ಅವಲಂಬಿತವಾದ್ದರೆ, ಆಗ ವೈಯಕ್ತಿಕ ಸಂದರ್ಶನಗಳನ್ನು ಶಿಫಾರಸು ಮಾಡಲಾಗುತ್ತದೆ. 5ರಿಂದ 14 ವರ್ಷದ ಮಕ್ಕಳ ಜೀವನದ ಉಪಯಕ್ತ ಹಾಗೂ ಅಪಾಯಕಾರಿ ಸಂಬಂಧಗಳ ಬಗ್ಗೆ (ರೋಜರ್ಸ್ ಮತ್ತಿತರು, 2005), ತರಗತಿಯಲ್ಲಿನ ಬರವಣಿಗೆಯ ಬಗ್ಗೆ ಪ್ರಾಥಮಿಕ ಶಾಲಾ ವಯಸ್ಸಿನ ಮಕ್ಕಳ ಅಭಿಪ್ರಾಯ (ಕಾಪೆಲ್ಲೋ, 2005), ಮತ್ತು ಶಾಲೆಯಲ್ಲಿ ನ್ಯೂನತೆಗಳ ಬಗ್ಗೆ 7ರಿಂದ 10 ವರ್ಷದವರಲ್ಲಿನ ಅಭಿಪ್ರಾಯಗಳು (ಹೋಲ್ಟ್, 2004) ಇವುಗಳ ಬಗ್ಗೆ ವೈಯಕ್ತಿಕ ಸಂದರ್ಶನಗಳನ್ನು ಬಳಸಿ ಅಧ್ಯಯನ ಮಾಡಲಾಗಿವೆ.

ಸಂದರ್ಶನಾತ್ಮಕ ಅಧ್ಯಯನಗಳು ಆಗಾಗ್ಗೆ ಇತರ ವಿಧಾನಗಳನ್ನು, ಉದಾಹರಣೆಗೆ, ಸಹಭಾಗೀ–ವೀಕ್ಷಕ ವಿಧಾನವನ್ನು ಸಮೀಕ್ಷಾ ಸನ್ನಿವೇಶದ ಪೂರ್ತಿ ಚಿತ್ರಣ ಪಡೆಯಲು, ಸಂದರ್ಶನದಲ್ಲಿ ಭಾಗವಹಿಸಲು ಆಹ್ವಾನಿಸುವುದಕ್ಕೆ ಮುಂಚೆ ಮಕ್ಕಳೊಡನೆ ಸಾಮರಸ್ಯ ಬೆಳೆಸಿಕೊಳ್ಳಲು ಮುಂತಾದವುಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಕೇವಲ ಸಂದರ್ಶನಗಳನ್ನೇ ಬಳಸಿ ಮಾಡುವ ಅಧ್ಯಯನಗಳು, ಸಂದರ್ಶಕ ಹಾಗೂ ಸಂದರ್ಶನಾರ್ಥಿಗಳ ನಡುವೆ ಬಾಂಧವ್ಯ ಬೆಳೆಯಲು ಬೇಕಾದ ಸಮಯಾವಕಾಶ ನೀಡಲು ಅನೇಕ ಸಂದರ್ಶನಗಳನ್ನು (multiple interviews) ಮಾಡುತ್ತಾರೆ. ತಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳ ಬಗ್ಗೆ ಮಕ್ಕಳ ತಿಳುವಳಿಕೆಯ ಬಗ್ಗೆ ರೋಜರ್ಸ್ ಮತ್ತು ಇತರರು (2005), ನಡೆಸಿದ ಸಂಶೋಧನೆಗಳದ್ದು ಅಂತಹ ಒಂದು ವರದಿ. ಆ ಸಂಶೋಧನೆಯಲ್ಲಿ 3 ವರ್ಷಗಳ ಕಾಲ ವಾರ್ಷಿಕವಾಗಿ 2–3 ಅಂತಹ ಸಂದರ್ಶನಗಳನ್ನು ನಡೆಸಿದರು.

ಮೊದಲನೆ ಸಂದರ್ಶನದಲ್ಲಿ ನಾವು ಮೊದಲೇ ತಯಾರಿಸಿದ ಶಿಷ್ಟಾಚಾರ ಸಂಹಿತೆಯನ್ನು ಅಥವಾ ನಿಯಮಾವಳಿಗಳನ್ನು ಉಪಯೋಗಿಸಲಿಲ್ಲ. ಚಿತ್ರವನ್ನು ರೂಪಿಸುವ ಸಲಕರಣೆಗಳು, ಕಾರ್ಡುಗಳು, ಹಾಸ್ಯಚಟಾಕಿಗಳು ಮುಂತಾದವುಗಳನ್ನು ನಾವು ತೆಗೆದುಕೊಂಡು ಹೋದೆವು. ಈ ಮೂಲಕ ಮೊದಲು ಅವರೊಡನೆ ಒಂದು ಬಾಂಧವ್ಯ ಬೆಳೆದು ಮಕ್ಕಳಿಗೆ ನಮ್ಮ ಮೇಲೆ ನಂಬಿಕೆ ಹುಟ್ಟಿ ನಂತರ ಅವರು ತಮ್ಮ ಜೀವನದ ಬಗ್ಗೆ ನೈಜ ವಿಷಯಗಳನ್ನು ಹೇಳಲು ಪ್ರಾರಂಭಿಸಬಹುದು ಎಂದು ಆಶಿಸಿದೆವು. . . . ಸಂದರ್ಶನದ ಕಾರ್ಯಸೂಚಿಯನ್ನು ನಿಗದಿತಗೊಳಿಸುವ ಬದಲಾಗಿ ಮಕ್ಕಳ ಕಥೆಗಳು, ನಾಟಕಗಳ ಮೂಲಕ ಸಂದರ್ಶನಗಳನ್ನು ಮುಂದುವರಿಸಲಾಯಿತು. ಎರಡನೆ ಸಂದರ್ಶನದಲ್ಲಿ, ಬೆಳವಣಿಗೆಗೆ ಸಂಬಂಧಿಸಿದ ವಿಷಯಗಳನ್ನು ತೆಗೆದುಕೊಂಡೆವು (ಚಿತ್ರದ ಸಲಕರಣೆಗಳು, ಮತ್ತು ಕೆಲವು ಪ್ರಶ್ನೆಗಳನ್ನು ವಯಸ್ಸಿಗನುಗುಣವಾಗಿ ವಿನ್ಯಾಸ ಮಾಡಲಾಯಿತು). ಈ ರೀತಿಯಾಗಿ, ಪ್ರತಿಯೊಬ್ಬರಿಗೂ ಸರಿಹೊಂದುವಂತೆ ವೈಯಕ್ತಿಕ ಸಂದರ್ಶನವನ್ನು ಮೊದಲನೆ ಸಂದರ್ಶನದ ಆಧಾರದಲ್ಲಿ ಅಳವಡಿಸಿಕೊಳ್ಳಲಾಯಿತು (ರೋಜರ್ಸ್ ಮತ್ತಿತರು, 2005 ಪು. 158).

ಸಂದರ್ಶನವೆಂಬುದು, 15 ನಿಮಿಷಗಳಿಂದ ಒಂದು ಘಂಟೆಯಲ್ಲಿ ನಡೆಸುವ ಒಂದು ಅಳ್ಳಕವಾದ ಮಾಹಿತಿ ಸಂಗ್ರಹಣೆಯ ವಿಧಾನ. ಸಂದರ್ಶನಾತ್ಮಕ ಸಂಶೋಧನೆಗಳನ್ನು ಯೋಜಿಸುವಾಗ ಸಂಶೋಧಕನು, ಯಾರು, ಎಷ್ಟು, ಎಷ್ಟು ಬಾರಿ, ಎಷ್ಟು ಸಮಯ, ಯಾವಾಗ, ಎಲ್ಲಿ ಮತ್ತು ಯಾಕೆ ಈ ಸಂಶೋಧನೆ, ಮತ್ತು ಅಗತ್ಯವಾದರೆ ಬದಲಾವಣೆಗಳನ್ನು ಮಾಡುವುದನ್ನು ಪರಿಗಣಿಸಿಕೊಳ್ಳಬೇಕು. ಸಂಶೋಧಕ–ಸಂದರ್ಶನಾರ್ಥಿಗಳ ನಡುವಿನ ಸಾಮರ್ಥ್ಯದ ಅಸಮತೋಲನವನ್ನು ಕಡಿಮೆಮಾಡಲು ಕೆಲವೊಮ್ಮೆ ಒಬ್ಬ ಸ್ನೇಹಿತ ಅಥವಾ ಒಬ್ಬ ಪೋಷಕರನ್ನು ಸಂದರ್ಶನಕ್ಕೆ ಆಹ್ವಾನಿಸುವುದು ಸಂಶೋಧಕನಿಗೆ ಹೆಚ್ಚು ಅರ್ಥಪೂರ್ಣವಾಗಿರುತ್ತದೆ (ಮಯಾಲ್, 2000). ಅಥವಾ

ಸಂದರ್ಶನವು ಮನೆಯಲ್ಲಿಯೇ ನಡೆಯುವುದಾದರೆ ತನ್ನ ಪೋಷಕರ ಉಪಸ್ಥಿತಿಯನ್ನು ಆಯ್ಕೆಮಾಡಿಕೊಳ್ಳುವ ಅವಕಾಶವನ್ನು ಕೊಡದಿರುವುದು ನೈತಿಕವಾಗಿರುವುದಿಲ್ಲ (ಬಾರ್ಕರ್ ಮತ್ತು ವೆಲ್ಲರ್, 2003). ಇಂತಹ ಸನ್ನಿವೇಶಗಳಲ್ಲಿ ಈ ನಿರ್ಧಾರಗಳ ಪರಿಣಾಮಗಳು ಬೇರೆ ಬೇರೆಯಾಗಿರುತ್ತವೆ. ಆದರೆ, ಅವುಗಳಲ್ಲಿ ಒಂದು ಪರಿಣಾಮವೆಂದರೆ, ಸಂಶೋಧಕನು ಆಗ ವೈಯಕ್ತಿಕ ಸಂದರ್ಶನವನ್ನು ನಡೆಸುವುದಿಲ್ಲ ಮತ್ತು ಮಾಹಿತಿಗಳ ವಿಶ್ಲೇಷಣೆ ಅದನ್ನು ಪ್ರತಿಫಲಿಸಬೇಕು (ತಿಳಿಸಬೇಕು). ಉದಾಹರಣೆಗೆ, ಹೆತ್ತವರು ಮತ್ತು ಮಕ್ಕಳನ್ನು ಒಟ್ಟಿಗೆ ಸಂದರ್ಶಿಸಿದಾಗ, ಅವರೊಳಗೆ ಭಿನ್ನಾಭಿಪ್ರಾಯವುಂಟಾಗಿ, ಮಕ್ಕಳು ಹೇಳಿದ್ದನ್ನು ಹೆತ್ತವರು ಒಪ್ಪದಿದ್ದಾಗ, ಅಥವಾ ಅವರ ಹೇಳಿಕೆಯನ್ನು ತಿದ್ದುವ ಪ್ರಯತ್ನ ಮಾಡಿದಾಗ, ಅಥವಾ ಹೆತ್ತವರು ಹೇಳಿದ್ದನ್ನು ಮಕ್ಕಳು ಒಪ್ಪದಿದ್ದಾಗ ಅದರಿಂದಾಗಿ ಮಗುವಿನ ದೃಷ್ಟಿಕೋನವನ್ನು ಸರಿಯಾಗಿ ವಿಶ್ಲೇಷಣೆ ಮಾಡುವುದು ಕಷ್ಟವಾಗಬಹುದು.

## ಸಮೂಹ ಸಂದರ್ಶನ ಅಥವಾ ಕೇಂದ್ರೀಕೃತ ಗುಂಪುಗಳು (Group interviews and focus groups)

ಒಂದು ಸಮಾನ ವಿಷಯವನ್ನು ಕೇಂದ್ರೀಕರಿಸಿಕೊಂಡು ನಡೆಸುವ ಸಮೂಹ ಸಂದರ್ಶನಗಳು ಮಕ್ಕಳನ್ನು ಸಮಾನವಾದ ಚಟುವಟಿಕೆಗಳಲ್ಲಿ ತೊಡಗಿಸುತ್ತವೆ, ಅಥವಾ ಸಮಾನ ಜೀವನಾನುಭವವುಳ್ಳ ಸದಸ್ಯರನ್ನು ಒಟ್ಟುಗೂಡಿಸುವುದರಿಂದ ಎಲ್ಲಾ ವಯಸ್ಸಿನ ಮಕ್ಕಳಿಗೆ ಅನ್ವಯವಾಗುವಂತಿರುತ್ತವೆ (ಡರ್ಬಿಶೈರ್, ಮ್ಯಾಕ್ಡೊಗಾಲ್ ಮತ್ತು ಸ್ಕಿಲ್ಲರ್, 2005; ಹೆನ್ನೆಸಿ ಮತ್ತು ಹೇರಿ, 2005; ಮೌತ್ನರ್, 1997; ಮೋರ್ಗನ್ ಮತ್ತಿತರರು, 2002). ನಾವು ಕೇಂದ್ರೀಕೃತ ಗುಂಪು ಹಾಗೂ ಸಮೂಹ ಸಂದರ್ಶನಗಳನ್ನು ಬೇರೆ ಬೇರೆಯಾಗಿ ಪರಿಗಣಿಸುವುದಿಲ್ಲ, ಅವೆರಡನ್ನೂ ಪರ್ಯಾಯವಾಗಿ ಬಳಸುತ್ತೇವೆ. ವಿಶಾಲವಾಗಿ ಹೇಳುವುದಾದರೆ, ಡಿ. ಎಲ್. ಮೋರ್ಗನ್ (1997) ಅರ್ಥೈಸಿದಂತೆ, "ಸಂಶೋಧಕನಿಂದ ನಿಗದಿತವಾದ ಒಂದು ವಿಷಯದ ಮೇಲೆ ಸಮೂಹ ಒಡನಾಟದ ಮೂಲಕ ಮಾಹಿತಿ ಸಂಗ್ರಹಿಸುವ ಒಂದು ಸಂಶೋಧನಾವಿಧಾನ"ವನ್ನು "ಕೇಂದ್ರೀಕೃತ ಗುಂಪು" ಎಂದು ನಾವು ಬಳಸುತ್ತೇವೆ (ಪು. 6). ವಾಸ್ತವವಾಗಿ, ಸಮೂಹವೇ ಅದಕ್ಕೆ ಗುಣವಿಶೇಷಗಳನ್ನು ಕೊಡುವುದು ಮಕ್ಕಳೊಡನೆ ಕೆಲಸ ಮಾಡುವ ಸಂಶೋಧಕನಿಗೆ ಈ ವಿಧಾನವು ಹೆಚ್ಚು ಆಪ್ಯಾಯಮಾನವಾಗಿರಲು ಕಾರಣ. ಒಂದು ಕೇಂದ್ರೀಕೃತ ಗುಂಪು ಪ್ರತಿಯೊಂದು ಮಗುವಿನ ಅನುಭವಗಳನ್ನು ಆಳವಾಗಿ ತಿಳಿಯಲು ಅನುಕೂಲಕರವಲ್ಲ, ಆದರೆ ಅದು ಅವರ ಅನುಭವಗಳ ಬಗ್ಗೆ ತಿಳಿಯಲು ಇತರ ಅವಕಾಶಗಳನ್ನು ಒದಗಿಸುತ್ತದೆ. ಹಾಗಿದ್ದರೂ ಈ ಇತರ ಅವಕಾಶಗಳು ಅನೇಕ ವೈಯಕ್ತಿಕ ಸಂದರ್ಶನಗಳಿಗೆ ಬದಲಿಯಲ್ಲ. ಏಕೆಂದರೆ ಮಾಹಿತಿ ಸಂಗ್ರಹಣೆಯಲ್ಲಿ ಸಮೂಹದ ಒಡನಾಟವು ಅತಿ ಮುಖ್ಯವಾದ ಅಂಶವೆಂದು ಪರಿಗಣಿಸಲ್ಪಟ್ಟಿದೆ, "ಸಮೂಹ ಸಂದರ್ಶನದ ಸಂಶೋಧಕರು, ಸರತಿಯಲ್ಲಿ ಸಂದರ್ಶನಾರ್ಥಿಗಳನ್ನು ಪ್ರಶ್ನೆಗಳನ್ನು ಕೇಳುವ ಬದಲು, ಸದಸ್ಯರು ಅವರೇ ಪರಸ್ಪರ ಪ್ರಶ್ನೆ ಕೇಳಲು, ಕಥಾನಕಗಳನ್ನು ವಿನಿಮಯಮಾಡಿಕೊಳ್ಳಲು ಮತ್ತು ಪರಸ್ಪರರ ಅನುಭವಗಳ ಬಗ್ಗೆ ಹಾಗೂ ದೃಷ್ಟಿಕೋನಗಳ ಬಗ್ಗೆ ಟೀಕೆ/ವಿಮರ್ಶೆ ಮಾಡಲು ಉತ್ತೇಜಿಸುತ್ತಾರೆ" (ಕಿಟ್ಜಿಂಗರ್ ಮತ್ತು ಬಾರ್ಬರ್, 1999 ಪು. 4).

ಕೆಲವು ಸಂದರ್ಭಗಳಲ್ಲಿ ಸಮೂಹ ಚಟುವಟಿಕೆಯು ಸಂಶೋಧನೆಯ ಕೇಂದ್ರಬಿಂದುವಾಗಿರುತ್ತದೆ. ಸಂಭಾಷಣೆಗಳ ಮೂಲಕ ಮಕ್ಕಳು ಜೊತೆಗೂಡಿದಾಗ ಅವರು ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಪಂಚಗಳಲ್ಲಿ ತೊಡಗಿಕೊಂಡು ಒಬ್ಬರನ್ನೊಬ್ಬರು ಒಪ್ಪಿಕೊಳ್ಳುತ್ತಾರೆ, ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ, ನಗುತ್ತಾರೆ ಅಥವಾ ಅಸಮಾಧಾನಗೊಳ್ಳುತ್ತಾರೆ. ಕುಟುಂಬ, ಸ್ನೇಹಿತರ ಗುಂಪು ಮುಂತಾದ ನಿಗದಿತ ವಿಷಯಗಳ ಮೇಲೆ ಮಾಡುವ ಸಂಶೋಧನೆಗಳಲ್ಲಿ ಸಮೂಹ ಸಂದರ್ಶನಗಳು ಹೆಚ್ಚು ಉಪಯುಕ್ತ, ಏಕೆಂದರೆ, ಅಂತಹ ಗುಂಪುಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಸಂವಹನ ಕ್ರಮಗಳು, ಮಾತುಕತೆಯ ಸ್ವರೂಪಗಳು ಹಾಗೂ ನಿಯಂತ್ರಣಗಳು ಈ ಸಮೂಹ

ಸಂದರ್ಶನದ ಒಡನಾಟಗಳಲ್ಲಿ ಉದ್ಭವಿಸುವ ಸಾಧ್ಯತೆಗಳಿವೆ. ಬೇರೆ ಸಂದರ್ಭಗಳಲ್ಲಿ ಗುಂಪಿನ ಸಾಮೂಹಿಕ ಜ್ಞಾನವು ಆಸಕ್ತ ವಿಷಯವಾಗಿರುತ್ತದೆ ಮತ್ತು ಈ ಒಟ್ಟು ತಿಳುವಳಿಕೆಯನ್ನು ಬೆಳೆಸಲು ಅನುಕೂಲಕರವಾಗಿರುತ್ತದೆ ಎಂದು ಕಾಣಲಾಗುತ್ತದೆ. "ಮಕ್ಕಳು ಸಮವಯಸ್ಕರ ಜೊತೆಗೂಡಿ ಅರ್ಥಮಾಡಿಕೊಳ್ಳುವ ಕಾರಣ ಸಮೂಹ ಸಂದರ್ಶನಗಳು ಈ ಸಮವಯಸ್ಕರ ಸಂಸ್ಕೃತಿಯಿಂದ ನೇರವಾಗಿ ಬೆಳೆಯುತ್ತವೆ. ವೈಯಕ್ತಿಕ ಸಂದರ್ಶನಕ್ಕಿಂತ ಭಿನ್ನವಾಗಿ, ಸಮೂಹ ಸಂದರ್ಶನಗಳು, ಭಾಗವಹಿಸುವವರು ಪರಸ್ಪರ ವಿನಿಮಯ ಮಾಡಿಕೊಳ್ಳುವ ವಿಸ್ತಾರವಾದ ಅನುಭವಗಳು ಹಾಗೂ ಅಭಿಪ್ರಾಯಗಳ ಮೇಲಿನ ಮಾತುಕತೆ ಹಾಗೂ ಚರ್ಚೆಗಳ ಆಧಾರದ ಮೇಲೆ ಬೆಳೆಯುತ್ತವೆ" (ಎಡರ್ ಮತ್ತು ಫಿಂಗರ್ಸನ್, 2003, ಪು. ೩೫).

ಕೇಂದ್ರೀಕೃತ ಗುಂಪುಗಳು ಆಗಾಗ್ಗೆ ಮಕ್ಕಳ ಸಾಮೂಹಿಕ ದೃಷ್ಟಿಕೋನ ಅಥವಾ ಬದುಕಿನ ಅನುಭವಗಳನ್ನು ಅರಿಯಲು ಉಪಯೋಗಿಸಲ್ಪಡುತ್ತವೆ. ಪ್ರತಿಯೊಬ್ಬರೂ ಏನು ಹೇಳುತ್ತಾರೆ ಎಂದು ತಿಳಿಯುವ ಬದಲು, ಇಡೀ ಗುಂಪನ್ನು ಅವರಿಗೆ ಪ್ರತ್ಯಕ್ಷವಾಗಿ ಅಥವಾ ನೇರವಾಗಿ ಅನುಭವವಿರುವ ವಿಷಯದ ಬಗ್ಗೆ ತಿಳುವಳಿಕೆ ಮೂಡಿಸುವುದೇ ಇದರ ಉದ್ದೇಶ. ಉದಾಹರಣೆಗೆ, ವೀಲೆ, 2005) ಅವರು ಸ್ಥಳಾಂತರಗೊಂಡ, 7ರಿಂದ 17 ವರ್ಷದ ರುವಾಂಡಾ ದೇಶದ ಮಕ್ಕಳ ಕೇಂದ್ರೀಕೃತ ಗುಂಪನ್ನು ಉಪಯೋಗಿಸಿದರು. ಕಾರ್ಯಾಗಾರ ಎಂದು ಕರೆಯಲ್ಪಟ್ಟ ಈ ಗುಂಪುಗಳು "ಅವರ ಸಮುದಾಯದ ಮಕ್ಕಳ ಜೀವನವನ್ನು ವಿಶ್ಲೇಷಿಸಿ, ತಮ್ಮ ಹಿನ್ನೆಲೆಯ ದೃಷ್ಟಿಯನ್ನಿಟ್ಟುಕೊಂಡು ಸ್ಪಷ್ಟಮಾತುಗಳಲ್ಲಿ ಹೇಳುವಂತೆ ಮಕ್ಕಳನ್ನು ತೊಡಗಿಸುವ ಕಾರ್ಯಮಾಡಿದವು" (ಪು. 255) ಈ ಪ್ರಕ್ರಿಯೆಯು, ಹೆಚ್ಚು ಕಳೆದುಕೊಂಡ ಮಕ್ಕಳಿಗೆ ಅವರ ಅನುಭವಗಳನ್ನು ಹಂಚಿಕೊಳ್ಳಲು, ಅವರ ಕೋಪ ಹಾಗೂ ದುಃಖಗಳನ್ನು ಹೇಳಿಕೊಳ್ಳಲು ಮತ್ತು ಅವರ ನಂಬಿಕೆಗಳನ್ನು ಪಾತ್ರಾಭಿನಯ ಹಾಗೂ ಕಥೆಗಳ ಮೂಲಕ ಅಭಿನಯಿಸಿ ತೋರಿಸಲು ಅವಕಾಶಮಾಡಿಕೊಡುವುದನ್ನು ಒಳಗೊಂಡಿತ್ತು. ಅವರು ಉಪಯೋಗಿಸಿದ ಸಾಮಾಜಿಕ ನಕಾಶೆ, ಕಥಾರೂಪದ ಆಟಗಳು, ಚಿತ್ರಗಳು, ನಾಟಕಗಳು ಮುಂತಾದ ಚಟುವಟಿಕೆಗಳು, "ಅವುಗಳ ಪ್ರತಿಫಲನ, ಅವುಗಳ ಬಗ್ಗೆ ಚರ್ಚೆ, ವಾದ, ಅಸಮ್ಮತಿ, ಮತ್ತು ಸಮ್ಮತಿಗಳನ್ನು ಸುಗಮಗೊಳಿಸಲು, ಬಗೆ ಬಗೆಯ ಅಭಿಪ್ರಾಯಗಳನ್ನು ಮತ್ತು ಸ್ಥಾನಗಳನ್ನು ಹೇಳಿಕೊಳ್ಳುವುದನ್ನು ಪ್ರಚೋದಿಸಲು ಮತ್ತು ಆ ಮೂಲಕ ಸಬಲೀಕರಣಕ್ಕೆ ಅಡಿಪಾಯ ಹಾಕುವ ಉದ್ದೇಶವನ್ನು ಹೊಂದಿದ್ದವು" (ಪು. 254). ಒಂದು ಉಪಮಾನದಂತೆ ಯೋಚಿಸುವುದಾದರೆ, ವೈಯುಕ್ತಿಕ ಸಂದರ್ಶನವು ಒಂದು ಆಲಿಕೆಯನ್ನು ಹೋಲಬಹುದು, ಅದರಲ್ಲಿ ಸಂಶೋಧಕನು/ಳು ಸಂದರ್ಶನಾರ್ಥಿಯ ಕಥೆಯನ್ನು ಅನುಸರಿಸುತ್ತಾ, ಆಗತಾನೇ ಹಂಚಿಕೊಂಡ ಅನುಭವದ ಬಗ್ಗೆ ಹೆಚ್ಚಿನ ವಿವರಣೆ ಕೇಳುತ್ತಾನೆ/ಳೆ. ಆದರೆ ಸಮೂಹ ಸಂದರ್ಶನವು ಬಹಳಷ್ಟು ಸಾರಿ ಒಂದು ಹಠಾತ್ ಉಗಮ(ಸಿಡಿತ)ಗಳ ಸರಣಿಯಂತೆ – ಅಂದರೆ, ಹಂಚಿಕೊಂಡ ಪ್ರತಿ ಅನುಭವವೂ ಅದಕ್ಕೆ ಸಂಬಂಧಿಸಿದ ವಿವಿಧ ಅನುಭವಗಳನ್ನು ಹೊರತರುವುದು ಎಂದು ಹೋಲಿಸಬಹುದು.

ಬಹಳಷ್ಟು ಸಂಶೋಧಕರ ಪ್ರಕಾರ, ಸಮೂಹ ಸಂದರ್ಶನಗಳು ಮಕ್ಕಳನ್ನು ಸಂದರ್ಶನದಲ್ಲಿ ಚೆನ್ನಾಗಿ ತೊಡಗಿಸಿಕೊಳ್ಳುವಂತೆ ಮಾಡುತ್ತವೆ. ಏಕೆಂದರೆ, ಅವು ವಯಸ್ಕರ ಅಧಿಕಾರದ ಪರಿಣಾಮಗಳನ್ನು ಕಡಿಮೆ ಮಾಡುತ್ತವೆ, ಪ್ರತಿಯೊಬ್ಬನೂ ಪ್ರಶ್ನೆಗೆ ಉತ್ತರಿಸಬೇಕೆಂಬ ಒತ್ತಡ ಕಡಿಮೆ ಮಾಡುತ್ತವೆ ಮತ್ತು ಗುಂಪಿನಲ್ಲಿರುವ ಬೇರೆಯವರಿಂದ ಬೆಂಬಲ ಸಿಗುವಂತೆ ಮಾಡುತ್ತವೆ (ಹೆನ್ನೆಸಿ ಮತ್ತು ಹೇರಿ, 2005; ಮೌತ್ನರ್, 1997). ಆದರೆ ಅಧಿಕಾರ ಹಾಗೂ ಅಂತಸ್ತುಗಳ ವ್ಯತ್ಯಾಸಗಳು ಮಕ್ಕಳಲ್ಲೂ ಕಂಡುಬರುತ್ತವೆ. ಮತ್ತು ಇವುಗಳು ಪ್ರತಿಯೊಬ್ಬ ಸದಸ್ಯನ ಒಡನಾಟ ಮತ್ತು ಕೊಡುಗೆಗಳ ಮೇಲೆ ಪರಿಣಾಮ ಬೀರುತ್ತವೆ. ಹರ್ವರ್ಥ್ ಮತ್ತಿತರ 2005 ಸಂಶೋಧಕರು ಒಡನಾಟ ಮತ್ತು ವಿಷಯವನ್ನು ಅರ್ಥೈಸುವ ಕ್ರಮವನ್ನು ಜಾಗ್ರತೆಯಿಂದ ಗಮನಿಸಬೇಕೆಂದು ಎಚ್ಚರಿಸುತ್ತಾರೆ, ಏಕೆಂದರೆ, "ಹೆಚ್ಚು

ಮಾತನಾಡುವ ಒಬ್ಬಿಬ್ಬರು ಸದಸ್ಯರು ಇಡೀ ಚರ್ಚೆಯ ಮೇಲೆ ಪ್ರಭಾವ ಬೀರಿ, ಗುಂಪಿನ 'ಸಹಭಾಜಿತ' ಒಮ್ಮತವನ್ನು ಒಂದು ಪಕ್ಕಕ್ಕೆ ವಾಲುವಂತೆ ಮಾಡಬಹುದು" (ಪು. 59).

ಕೇಂದ್ರೀಕೃತ ಗುಂಪಿನ ಒಡನಾಟದ ಸ್ವರೂಪವು ಮಕ್ಕಳ ಕೊಡುಗೆಯನ್ನು ಹೆಚ್ಚಿಸಲೂಬಹುದು ಅಥವಾ ಎಲ್ಲಾ ಮಕ್ಕಳು ತಮ್ಮ ಅಭಿಪ್ರಾಯ ಸೂಚಿಸುವುದಕ್ಕೆ ಅಡ್ಡವಾಗಲೂಬಹುದು. ಉದಾಹರಣೆಗೆ, 4ನೆ ತರಗತಿಯವರೊಡನೆ ನಡೆಸಿದ ಎರಡನೆಯ ಸಮೂಹ ಸಂದರ್ಶನದ ಕೊನೆಯ ಚಟುವಟಿಕೆಯು, "ಆಂಗ್ಲ ಭಾಷಾ ಪರೀಕ್ಷೆಯು ಮುಗಿಯಿತೆಂದು ನನಗೆ ಸಂತೋಷ, ಏಕೆಂದರೆ . . . . ." ಎಂಬ ವಾಕ್ಯವನ್ನು ಪೂರ್ಣಗೊಳಿಸುವುದಾಗಿತ್ತು. ಉಪನಗರದಿಂದ ಬರುವ ಕೋರ್ಬಿನ್ ಎಂಬ ಹುಡುಗನು ನಾವು ಅವರ ಸುತ್ತಲೂ ಹೋಗುತ್ತಿದ್ದಾಗ ಚಡಪಡಿಸುತ್ತಾ ತನ್ನ ಸರದಿಗಾಗಿ ಕಾಯುತ್ತಿದ್ದನು. ಆದರೆ, ಅವನ ಸರದಿ ಬಂದಾಗ ಅವನು ಹೇಳಿದನು, "ಆಂಗ್ಲ ಭಾಷಾ ಪರೀಕ್ಷೆಯು ಮುಗಿಯಿತೆಂದು ನನಗೆ ಸಂತೋಷ, ಏಕೆಂದರೆ . . . ಹ್ಞ, ಮೋರ್ಗನ್, ಲಿನ್ ಮತ್ತು ಮೇಗನ್ ಅವರಂತೆ ನಾನು ಒಂದು ಪುಸ್ತಕದಿಂದ ಟಿಪ್ಪಣಿ ಬರೆದುಕೊಳ್ಳಲು ಇಷ್ಟಪಡುವುದಿಲ್ಲ, ಮತ್ತು, ಹ್ಞ, ನಿಮಗೆ ಗೊತ್ತೇ? ಅದು ನೀವು ನಾಟಕದ ತಯಾರಿ ನಡೆಸಿದಂತೆ, ನನಗೆ ಏಕಾಂಕ ನಾಟಕ ಮಾಡಲು ಇಷ್ಟವಿಲ್ಲ, ಆದರೆ, ನನಗೆ ನನ್ನದೇ ಆದ ಏಕಾಂಕ ನಾಟಕ ಮಾಡಬೇಕೆಂದು ಇಷ್ಟ. ಅದು ಒಂದು ರೀತಿಯಲ್ಲಿ ಸ್ವತಂತ್ರವಾಗಿ ಮಣ್ಣು ರಸ್ತೆಯಲ್ಲಿ ಮೋಟಾರು ಸವಾರಿ ಮಾಡಿದಂತೆ ಅಥವಾ ಒಂದು ದೊಡ್ಡ ಲಾರಿಯನ್ನು ಓಡಿಸಿದಂತೆ, ಆದರೆ ಅದು ನನಗೆ ಇಷ್ಟವಿಲ್ಲ. ಡೇವಿಡ್ ಹೇಳಿದಂತೆ ನನಗೆ ನಿಜವಾದ ಪರೀಕ್ಷೆಯು ಇಷ್ಟ ಏಕೆಂದರೆ, ಅಸಲಿ ಪರೀಕ್ಷೆಯು ನಿಜವಾಗಿಯೂ ನಮ್ಮ ಶ್ರೇಣಿಗಳನ್ನು ವಿಂಗಡಿಸುತ್ತದೆ, ಮತ್ತು ನಾವು ಅಸಲಿ ಪರೀಕ್ಷೆಯನ್ನು ಮೂರು ಬಾರಿ ತೆಗೆದುಕೊಳ್ಳುವುದರಿಂದ, ಹ್ಞ, ಕನಿಷ್ಟ ಮೂರು ಪೂರ್ವ ಪರೀಕ್ಷೆಗಳನ್ನು ತೆಗೆದುಕೊಳ್ಳುವುದು, ಅಂದರೆ 9ಕ್ಕೂ ಹೆಚ್ಚು ಪೂರ್ವ ಪರೀಕ್ಷೆಗಳು, ಮತ್ತು ನಾವು ಅಸಲಿಯಲ್ಲಿ ಕೇವಲ ಮೂರು ಅಧಿವೇಶನಗಳಲ್ಲಿ ತೆಗೆದುಕೊಳ್ಳುತ್ತೇವೆ."

ನಗರದ ನಾಲ್ಕನೆಯ ತರಗತಿಯ ಮಕ್ಕಳೂ ಕೂಡ ಪರಸ್ಪರ ಕೇಳಿಸಿಕೊಳ್ಳುತ್ತಿದ್ದರು, ಆದರೆ ಈ ಮೇಲಿನ ಉದ್ಧೃತ ಭಾಗದಲ್ಲಿ ಅವರು ಚಡಪಡಿಸುತ್ತಿದ್ದರು ಮತ್ತು ಪರಸ್ಪರ ಅಡ್ಡಿಮಾಡುತ್ತಿದ್ದರು (ಆದರೆ ಈ ವರ್ತನೆಗಳು ನಮ್ಮ ಸಂದರ್ಶನಗಳಲ್ಲಿನ ಒಟ್ಟಾರೆ ವರ್ತನೆಗಳೆಂದು ತಿಳಿಯಬಾರದು).

ಆಂಬರ್: ಆಂಗ್ಲಭಾಷೆ ಪರೀಕ್ಷೆಯು ಮುಗಿಯಿತೆಂದು ನನಗೆ ಸಂತೋಷ, ಏಕೆಂದರೆ . . .
ಬಾಯ್ಮುಚ್ಚಿ! (ಅವಳ ದನಿಯನ್ನು ಮೀರಿ ಮಾತನಾಡುತ್ತಿದ್ದ ಬೇರೆ ಮಕ್ಕಳನ್ನು ಉದ್ದೇಶಿಸಿ)
ವಿನ್ಸೆಂಟ್: ಏಕೆಂದರೆ . . . "ಬಾಯ್ಮುಚ್ಚಿ" (ರೇಗಿಸುತ್ತಾ)
ಜೇಕ್: (ಆಂಬರ್‌ಳ ಸಹೋದರ, ವಿನ್ಸೆಂಟ್‌ನನ್ನು ನೋಡಿ ಅಣಕಿಸುತ್ತಾ) ಮನೆಗೆ ಹೋಗುವಾಗ
ನೋಡ್ಕೊಳ್ತೀನಿ.
ಸಂಶೋಧಕ: ಅವಳು ಉತ್ತರಿಸಲಿ.
ಆಂಬರ್: ಅದು ಕಷ್ಟಕರವಾಗಿತ್ತು. ಅದೇ
ಜೇಕ್: ಆಂಗ್ಲಭಾಷಾ . . . ಅದು ತುಂಬಾ ತಲೆಚಿಟ್ಟುಹಿಡಿಸುವುದಾಗಿತ್ತು.
ವಿನ್ಸೆಂಟ್: ನಾನೂ ಅದನ್ನೇ ಹೇಳಬೇಕೆಂದಿದ್ದೆ.

ಅಂತರ್ವೈಯಕ್ತಿಕ ಒಡನಾಟವು ಕೇಂದ್ರೀಕೃತ ಗುಂಪಿಗೆ ಅನುಕೂಲವೆಂದು ಭಾವಿಸಲಾಗಿದೆ; ಆದರೆ ಒಡನಾಟದ ಸ್ವರೂಪವನ್ನು ಕಂಡುಹಿಡಿಯಲು ಮತ್ತು ಅಂತಹ ಒಡನಾಟಗಳು ಯಾವಾಗಲೂ ಧನಾತ್ಮಕವಾಗಿರುವುದಿಲ್ಲವೆಂದು ಗುರುತಿಸುವಲ್ಲಿ ಗುಂಪಿನ ಪ್ರಕ್ರಿಯೆಗಳ ಪಾತ್ರವನ್ನು ಗಣನೆಗೆ ತೆಗೆದುಕೊಳ್ಳುವುದು ಅತೀ ಅಗತ್ಯ. ಗುಂಪಿನ ಒಳಗಿನ ಬೆದರಿಕೆಯು ಕೆಲವು ಬಾರಿ ಕೆಲವು ಸದಸ್ಯರು ತಮ್ಮ ಕೊಡುಗೆಯನ್ನು ನೀಡಲು ಹಿಂಜರಿಯುವಂತೆ ಮಾಡುವ ಸಾಧ್ಯತೆಗಳಿವೆ (ಲೆವಿಸ್, 1992). ಕೆಲವು ಬಾರಿ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯಗಳು, ಅವರು ಗುಂಪಿನ ಇತರರೊಡನೆ ಸೇರಿಕೊಂಡಿರಬೇಕೆಂಬ ಇಚ್ಛೆಯ ಪ್ರಭಾವಕ್ಕೊಳಪಟ್ಟಿರಬಹುದು (ಹೆನ್ನೆಸಿ ಮತ್ತು ಹೇರಿ, 2005).

ಕೇಂದ್ರೀಕೃತ ಗುಂಪುಗಳು ಕೆಲವು ವಿಶಿಷ್ಟವಾದ ಸವಾಲುಗಳನ್ನು ಒಡ್ಡುತ್ತವೆ ಮತ್ತು ಪ್ರತಿಯೊಬ್ಬರಿಗೂ ಬರಲು ಅನುಕೂಲವಾಗುವಂತೆ ಸಮಯ ಹಾಗೂ ಸ್ಥಳಗಳನ್ನು ಹೊಂದಿಸುವುದು ಅಗತ್ಯವಾಗಿರುವುದರಿಂದ, ಅವುಗಳನ್ನು ನಿಗದಿಗೊಳಿಸುವುದು ಇನ್ನೂ ಹೆಚ್ಚಿನ ಕಷ್ಟ. ಅವುಗಳು ಗೋಪ್ಯತೆಯ ವಿಚಾರಗಳನ್ನು ಹುಟ್ಟುಹಾಕುತ್ತವೆ, ಏಕೆಂದರೆ, ಗುಂಪಿನಲ್ಲಿ ಹಂಚಿಕೊಂಡ ಮಾಹಿತಿಗಳು ಗುಂಪಿನ ಹೊರಗೂ ಬರುವ ಸಾಧ್ಯತೆಗಳಿವೆ. ಇದಕ್ಕಿರುವ ಒಂದು ತಂತ್ರವೆಂದರೆ, ಗುಂಪಿನ ಸದಸ್ಯರಿಗೆ ಅಲ್ಲಿ ಹಂಚಿಕೊಂಡ ವಿಚಾರಗಳನ್ನು ಹೊರಗಡೆ ತಿಳಿಯಪಡಿಸುವುದು ಸರಿಯಲ್ಲ ಎಂದು ತಿಳಿಹೇಳುವುದು. ಆದರೆ ಈ ಗುಂಪಿನ ವಿಚಾರವಿನಿಮಯಗಳ ಬಗ್ಗೆ ಒಟ್ಟಾರೆಯಾಗಿ ಏನು ಹೇಳಲಾಯಿತು ಎಂದು ಹೇಳಬಹುದು. ಈ ತಂತ್ರವು ಕೆಲವು ಮಕ್ಕಳಿಗೆ ಸರಿಹೋದರೂ, ಆ ಗುಂಪಿನ ಸಾಮಾಜಿಕ-ಸಾಂಸ್ಕೃತಿಕ ನಡಾವಳಿಗಳನ್ನು ಅರ್ಥಮಾಡಿಕೊಳ್ಳುವುದು ತುಂಬಾ ಮುಖ್ಯ. ಹದಿಹರೆಯದ ಸದಸ್ಯರನ್ನು ಗೋಪ್ಯತೆಗೆ ಜವಾಬ್ದಾರರನ್ನಾಗಿ ಮಾಡುವುದು ಅವರಲ್ಲಿ ಆತಂಕವನ್ನುಂಟುಮಾಡಬಹುದು, ಏಕೆಂದರೆ, ಇತರರೊಡನೆ ಹಂಚಿಕೊಳ್ಳಬಾರದೆಂಬ ಸಂಶೋಧಕನು ನಿರ್ಧರಿಸಿದ ಮಾನದಂಡ ಅಥವಾ ನಿರ್ಣಾಯಕ ಅಂಶವನ್ನು ಅವರು ಹಂಚಿಕೊಳ್ಳದಿರಬಹುದು. ಮುಂದಕ್ಕೆ, ಯಾವುದು ಮಕ್ಕಳಿಗೆ ಮುಜುಗರವನ್ನುಂಟುಮಾಡುತ್ತದೋ ಅದು, ವಯಸ್ಕರು ಯಾವುದು ಮುಜುಗರವನ್ನುಂಟುಮಾಡುತ್ತದೆ ಎಂದು ಭಾವಿಸುತ್ತಾರೋ ಅದಕ್ಕಿಂತ ಭಿನ್ನವಾಗಿರುತ್ತದೆ. ಚರ್ಚಾ ವಿಷಯವು ಪುನರಾವರ್ತಿಸುವುದಕ್ಕೆ ತುಂಬಾ ಸೂಕ್ಷ್ಮ ಎಂದೆನಿಸಿದರೆ, ಆಗ ಅದು ಸಮೂಹ ಸಂದರ್ಶನಕ್ಕೆ ತಕ್ಕುದಾದುದಲ್ಲ, ಅದರಲ್ಲೂ ನಿರಂತರವಾಗಿ ಒಡನಾಟದಲ್ಲಿರುವ ಮಕ್ಕಳ ಜೊತೆ ಚರ್ಚಿಸಲು ತಕ್ಕುದಾದುದಲ್ಲ. ಇತರ ವಿಧಾನಗಳೆಂದರೆ, ನಿರಂತರ ಒಡನಾಟದಲ್ಲಿಲ್ಲದ ಮಕ್ಕಳ ಗುಂಪನ್ನು ರಚಿಸುವುದು ಬಹುಶಃ ಒಂದು ಮಾರ್ಗ. ಒಂದು ಕೇಂದ್ರೀಕೃತ ಗುಂಪನ್ನು ಪ್ರಾರಂಭಿಸುವ ಮೊದಲೇ ಮಕ್ಕಳಿಗೆ ಯಾವ ವಿಷಯವನ್ನು ನಿರಾತಂಕವಾಗಿ ಹಂಚಿಕೊಳ್ಳಲು ಸಾಧ್ಯವಾಗುತ್ತದೋ ಅವುಗಳನ್ನು ಮಾತ್ರ ಹಂಚಿಕೊಳ್ಳಿ ಎಂದು ಹೇಳುವುದು ಅಥವಾ ಖಾಸಗಿ ವಿಷಯಗಳನ್ನು ಹಂಚಿಕೊಳ್ಳಬಲ್ಲ ಸಲಿಂಗ (same-sex) ಗುಂಪು, ಸ್ನೇಹಿತರ ಗುಂಪುಗಳನ್ನು ರಚಿಸುವುದು.

ಸಲಿಂಗ ಗುಂಪುಗಳ ಬಗ್ಗೆ ದೊರೆತ ಬರಹಗಳು ಹೆಣ್ಣುಮಕ್ಕಳು ಮತ್ತು ಗಂಡುಮಕ್ಕಳು ತಮ್ಮ ಸಮಸ್ಯೆಗಳ ಬಗ್ಗೆ ವಿಭಿನ್ನವಾಗಿ ಮಾತನಾಡುತ್ತಾರೆ ಮತ್ತು ನಿಭಾಯಿಸುತ್ತಾರೆ ಎಂದು ಸೂಚಿಸಿರುವ ಆಧಾರದ ಮೇಲೆ ಪಂಚ್ 2002aರವರು, 13-14 ವರ್ಷದವರು ಅವರ ಸಮಸ್ಯೆಗಳು, ಯೋಗಕ್ಷೇಮ ಮತ್ತು ಅವುಗಳ ನಿಭಾಯಿಸುವಿಕೆಗಳ ಬಗ್ಗೆ ಇರುವ ಅವರ ಗ್ರಹಿಕೆಗಳನ್ನು ಅನ್ವೇಷಿಸುವಾಗ ಅವರು ಸಲಿಂಗ ಗುಂಪುಗಳನ್ನು ಮಾಡಿದರು. ಕೇಂದ್ರೀಕೃತ ಗುಂಪು ಒಂದು ಸಮೂಹ ಸಂಗತಿ ಎಂದ ಮಾತ್ರಕ್ಕೆ ವೈಯಕ್ತಿಕ ಪ್ರತಿಕ್ರಿಯೆ ನೀಡುವುದಕ್ಕೆ ಅಡ್ಡಿಪಡಿಸುವುದಿಲ್ಲ. ನಮ್ಮಲ್ಲಿ ಆ ರೀತಿ ನಿಧಾನವಾಗಿ ಮಾತಿಲ್ಲದೆ ಬರಹದ ಮೂಲಕ ಉತ್ತರಿಸುವ ವಿದ್ಯಾರ್ಥಿಗಳೂ ಇದ್ದರು. ಕೆಲವು ವಿದ್ಯಾರ್ಥಿಗಳು ತಾವು ಬರೆದ ಉತ್ತರಗಳನ್ನು ಇತರರಿಗೆ ವರ್ಗಾಯಿಸುತ್ತಾ, ಅವರಿಗೆ ತಮ್ಮ ಪ್ರತಿಕ್ರಿಯೆಗಳನ್ನು ಅವುಗಳ ಕೆಳಗೆ ಬರೆಯಲು, ಆ ಮೂಲಕ ಅವರಿಗೆ ಉತ್ತರಿಸಲು, ಪ್ರತಿಫಲಿಸಲು ಅಥವಾ ಅಲ್ಲಗಳೆಯಲು ಅವಕಾಶ ಕೊಟ್ಟರೂ ಕೂಡ,

ಇತರರು ಬರೆದುದನ್ನು ಹಂಚಿಕೊಳ್ಳದೆ, ಅವರಿಗೆ ಗುಪ್ತವಾಗಿ ತಮ್ಮ ಹೇಳಿಕೆಗಳನ್ನು ಬರೆಯಲು ಅವಕಾಶವನ್ನು ಅಳವಡಿಸಿಕೊಳ್ಳಬಹುದಾಗಿತ್ತು.

ಯಾವುದೇ ಅಧ್ಯಯನವನ್ನು ರೂಪಿಸುವಾಗ, ಪ್ರತಿಯೊಂದು ಅಂಶವನ್ನೂ ಅದು ಏನನ್ನು ಕೊಡುತ್ತದೆ ಹಾಗೂ ಅದನ್ನು ಯಾವುದಕ್ಕೆ ಬದಲಾಗಿ ತೆಗೆದುಕೊಳ್ಳಲಾಗಿದೆ ಎಂಬುದನ್ನು ಪರಿಗಣಿಸಬೇಕಾಗುತ್ತದೆ. ಅಧ್ಯಯನದ ಧ್ಯೇಯಕ್ಕನುಗುಣವಾಗಿ ಸಂಶೋಧಕರು ವಿವಿಧ ವಿಧಾನಗಳನ್ನು ಒಂದು ಕ್ರಮಶಾಸ್ತ್ರಕ್ಕನುಗುಣವಾಗಿ, ಉದಾಹರಣೆಗೆ, ಕೇಂದ್ರೀಕೃತ ಗುಂಪು ಅಥವಾ ವಿವಿಧ ವಿಧಾನಗಳನ್ನು ಸೇರಿಸಿಕೊಳ್ಳುವುದು ಅಂದರೆ, ಒಂದೇ ಗುಂಪಿನ ಸದಸ್ಯರೊಡನೆ ವೈಯುಕ್ತಿಕ ಮತ್ತು ಸಮೂಹ ಸಂದರ್ಶನಗಳನ್ನು ನಡೆಸುವುದು ಇತ್ಯಾದಿ ಬೇರೆಬೇರೆ ರೀತಿ ಮಾಡುತ್ತಾರೆ. ಓರೆನ್‌ಸ್ಟೀನ್, 1994) ಅವರು 8ನೆ ತರಗತಿಯ ಹುಡುಗಿಯರ ಬಗ್ಗೆ ನಡೆಸಿದ ಅಧ್ಯಯನದಲ್ಲಿ ಹದಿಹರೆಯದ ಹೆಣ್ಣುಮಕ್ಕಳ ಸಮಸ್ಯೆಗಳ ವಿಸ್ತಾರ ಹಾಗೂ ಆಳವನ್ನು ಅರಿಯಲು ಕೇಂದ್ರೀಕೃತ ಗುಂಪು ಮತ್ತು ವೈಯುಕ್ತಿಕ ಸಂದರ್ಶನಗಳನ್ನು ಬಳಸಿದರು. ಇದರ ಜೊತೆಗೆ ಮಿಶೆಲ್, 1999) ಅವರು, ಸಮೂಹ ಹಾಗೂ ವೈಯುಕ್ತಿಕ ಸಂದರ್ಶನಗಳಲ್ಲಿ 11 ವರ್ಷದ ಹುಡುಗಿಯರ ಪ್ರತಿಕ್ರಿಯೆಗಳನ್ನು ಹೋಲಿಸಿ ನೋಡಿ, ಹುಡುಗಿಯರ ಸಾಮಾಜಿಕ ಸ್ಥಾನಗಳಿಗನುಗುಣವಾಗಿ (ಮೇಲ್ವರ್ಗ, ಮಧ್ಯಮ ವರ್ಗ, ಕೆಳವರ್ಗ) ಈ ಎರಡು ರೀತಿಯ ಸಂದರ್ಶನದ ಉತ್ತರಗಳು ಗಮನಾರ್ಹವಾಗಿ ಭಿನ್ನವಾಗಿದ್ದವು ಎಂದು ತೀರ್ಮಾನಿಸಿದರು. ಮಿಶೆಲ್‌ರ ಈ ಅನ್ವೇಷಣೆಯು, ಕೇಂದ್ರೀಕೃತ ಗುಂಪಿನ ಸದಸ್ಯರ ಒಡನಾಟಗಳನ್ನು ಮತ್ತು ಉತ್ತರಗಳನ್ನು ಅರ್ಥಮಾಡಿಕೊಳ್ಳಲು ಅವರ ಸಾಮಾಜಿಕ ಸನ್ನಿವೇಶಗಳನ್ನು ಅರ್ಥಮಾಡಿಕೊಳ್ಳುವುದು ಅತೀ ಅಗತ್ಯ ಎಂಬ ನಮ್ಮ ನಂಬಿಕೆಯನ್ನು ಪುಷ್ಟಿಗೊಳಿಸುತ್ತದೆ.

ಚರ್ಚಾ ಪ್ರಶ್ನೆಗಳು

1. ಬಹಳಷ್ಟು ಬಾರಿ ಹದಿಹರೆಯದವರಿಗೆ ಬೋಧನೆ ಮಾಡುವ ಹಾಗೂ ಮಾರ್ಗದರ್ಶನ ಮಾಡುವ ಅವಶ್ಯಕತೆ ಕಂಡುಬರುತ್ತದೆ. ಒಂದು ಹುಡುಗ ಅಥವಾ ಹುಡುಗಿಯ ಜೊತೆ ಕುಳಿತುಕೊಂಡು, ಅವರು ಜೀವನದ ಯಾವುದಾದರೊಂದು ವಿಷಯದಲ್ಲಿ ಪರಿಣತನೆಂ(ಳೆಂ)ದು ಭಾವಿಸಿ ಅವರ ಜೊತೆಗೆ ಸಂಭಾಷಣೆ ನಡೆಸಿರಿ. ಅವನಿ(ಳಿ)ಗೆ ಮುಖ್ಯವೆನಿಸಿದ ಅಥವಾ ಆಸಕ್ತಿದಾಯಕವಾದ ಯಾವುದಾದರೂ ವಿಷಯದ ಬಗ್ಗೆ ಮಾತನಾಡಲು ಹೇಳಿರಿ. ಆ ಮಗುವಿಗೆ ನಿಮ್ಮೊಟ್ಟಿಗೆ ಆ ಬಗ್ಗೆ ಮಾತನಾಡಲು ಎಷ್ಟು ಸುಲಭ ಅಥವಾ ಕಷ್ಟವಾಗಿದೆ? ಮಗುವೇ ಮುಂದುವರಿದು ಮಾತನಾಡುವಂತೆ ಮಾಡಲು ನಿಮಗೆ ಎಷ್ಟು ಸುಲಭ ಅಥವಾ ಕಷ್ಟವಾಗಿದೆ? ಸುಲಭ ಅಥವಾ ಕಷ್ಟವಾಗಲು ಕಾರಣವೇನು? ಸಂಭಾಷಣೆಯನ್ನು ಒಂದು ನೈಜ ಸಂಭಾಷಣೆಯಾಗಿ ಮಾಡಲು ನೀವು ಏನು ಮಾಡಬಹುದಾಗಿತ್ತು?

2. 10 ಪ್ರಶ್ನೆಗಳ ಒಂದು ಸಂದರ್ಶನದ ಪಟ್ಟಿಯನ್ನು ಮಕ್ಕಳಿಗೆ ಹೊಂದುವಂತೆ ತಯಾರಿಸಿ. ಮುಕ್ತ ಪ್ರಶ್ನೆಗಳಿಗಿಂತ ಬೇರೆಯಾದ ವಿಧಾನಗಳನ್ನು ಪರಿಗಣಿಸಿ – ಅಂದರೆ, ಬರಹ, ಆಟ, ಭಾವಚಿತ್ರ ಪ್ರಚೋದಿತ ವಿಧಾನಗಳು, ನಕಾಶೆ ಇತ್ಯಾದಿ. ಇವುಗಳನ್ನು ಒಬ್ಬ ಸಹಪಾಠಿಯೊಡನೆ ಹಂಚಿಕೊಳ್ಳಿ. ನಿಮ್ಮ ಚರ್ಚೆಯ ಬಳಿಕ ಈ ಪಟ್ಟಿಯನ್ನು ಪರಿಷ್ಕರಿಸಿ.

ಪದಕೋಶ

ಸಂದರ್ಶನ – Interview, interviewing (both noun & verb)

ಅಂತರಾರ್ಥ, ಅರ್ಥೈಸು – Interpretation

ಸಮಾಜ ವಿಜ್ಞಾನ – Social science

ಬರಹ ಹಾಗೂ ಮೌಖಿಕ – Print & Nonprint

ಸಾಂಸ್ಕೃತಿಕ – Cultural

ಅನುಮೋದಿಸು – Favour

ಸಹಭಾಗೀ ವೀಕ್ಷಕನನ್ನೊಳಗೊಂಡ ಅಧ್ಯಯನಗಳು – Participat – observation studies

ಅನೌಪಚಾರಿಕ – Informal

ಅರೆ – ವಿನ್ಯಾಸದ – Semi-structured

ಯೋಜಿಸು, ವ್ಯವಸ್ಥೆಮಾಡು – Plan

ಪ್ರತಿಫಲದಾಯಕವಾದ – Rewarding

ಕಟ್ಟುನಿಟ್ಟಿಲ್ಲದ, ಅಳ್ಳಕವಾದ – Flexible

ವಿಚಾರಮಾಡು, ಪರ್ಯಾಲೋಚಿಸು, ಪ್ರತಿಬಿಂಬಿಸು – Reflect

ಕೇಂದ್ರಬಿಂದು, ಕೇಂದ್ರೀಕೃತ – Focus

ಹರಡು, ಚದುರು, – Diffuse

ಮೆಚ್ಚುಗೆ – Appreciation

ಪ್ರಭಾವ, ಹತೋಟಿ, ನಿಯಂತ್ರಣ –Power

ನಿದರ್ಶಿಸು –Illustrate

ವಸ್ತುಸ್ಥಿತಿ, ವಾಸ್ತವಾಂಶ, ವಿಷಯ, ಸತ್ಯಾಂಶ – Fact

ಪಾತ್ರ – ಚಿತ್ರಣ – Role play

ಹೊರತರು, ಬಯಲಿಗೆಳೆ – Elicit

ಪರಿಗಣಿಸು, ಗಣನೆಗೆ ತಂದುಕೊಳ್ಳು – Consideration

ಸಮಾಜದ ರಚನಾತ್ಮಕ ಚೌಕಟ್ಟು (ಹಿನ್ನೆಲೆ) – Social constructivist perspective

ಜೊತೆಗೂಡಿ – Collaborated

ವಸ್ತುನಿಷ್ಟ ಪ್ರಪಂಚ, ಭೌತಿಕ ಪ್ರಪಂಚ – Material world

ನೈಜ, ಪ್ರಾಮಾಣಿಕ, ವಿಶ್ವಾಸಾರ್ಹ - Authentic

ಅಭಿಪ್ರಾಯ, ದನಿ - Voice

ನಿಭಾಯಿಸು – Negotiate

ಬಹಿರಂಗಪಡಿಸಿದ ಹಾಗೂ ಬಹಿರಂಗಪಡಿಸದ – Spoken & Unspoken

ಸಾಮಾಜೀಕರಣ – Socialization

ಇತಿಮಿತಿ – Limit

ಪರಿಣಾಮಕ್ಕೆ ಈಡುಮಾಡು – Entails

ಆಪ್ತಸಲಹೆಗಾರ – Counsellor

ಚಿಕಿತ್ಸಕ – Therapist

ಪ್ರಕರಣ ನಿರ್ವಾಹಕ – Case worker

ಉತ್ತಮಪಡಿಸು – Amelioration

ಸಫಲತೆ – effectiveness

ಆಪ್ತತೆ, ಆತ್ಮೀಯತೆ, ಸಲಿಗೆ – Intimacy

ವ್ಯಕ್ತಿಗತ, ಖಾಸಗಿ, ಆಪ್ತತೆ – personal

ಅಸ್ಪಷ್ಟ – Vague

ಗೊಂದಲಗೊಳಿಸುವಂತಹ – Confusing

ಅಲ್ಲಗಳೆಯು – Contradict

ಸುಗಮವಾಗಿಸು – Facilitate

ಸಂಯೋಜನೆ – Choreograph

ಮನ್ನಣೆ ಮಾಡು – Acknowledge

ಸಾಮರ್ಥ್ಯ, ಬಲ – Potency

ಸಾಧ್ಯತೆ – Potential

ಸಂಬಂಧಿತ – Relate

ಅಪರಿಚಿತ – Unfamiliar

ಸನ್ನಿವೇಶದಲ್ಲಿ ಸ್ವತಃ ಇದ್ದುಕೊಂಡು, ಭಾಗಿಯಾದ ವ್ಯಕ್ತಿ – Personc-in-situation

ಅರ್ಥೈಸಲಾಗು – Construed

ಊಹಿಸು, ಅಂದುಕೊಂಡು – Assume

ಕೊಡು – Ascribe

ಕಾರ್ಯಾಚರಣೆ – Performance

ಒತ್ತಾಸೆ, ಬೆಂಬಲ – Support

ಕಲ್ಪನೆ (ಅಭಿಪ್ರಾಯ, ಅನಿಸಿಕೆ) – Notion

ಸವಾಲು – Challange

ನೆಲೆಸು – Inhabit

ಗುಣವಿಶೇಷಗಳು – Characteristics

ಸಂಕ್ಷೇಪವಾಗಿ ತಿಳಿಸು – Summarize

ವಿಶ್ವಾಸದ ಸಂಬಂಧ – Rapport

ನೈಜವಾದ – Genuine

ಅನುಭೂತಿ – Empathy

ಪ್ರತಿಕೂಲವಾದ – Hostile

ಸಂಕೋಚಗೊಳ್ಳುವ, ಗಾಬರಿಗೊಳ್ಳುವ – Shy

ಮಾರ್ಗೋಪಾಯ, ಕಾರ್ಯ ವಿಧಾನ, ತಂತ್ರ – Strategy

ಸರಿಯಾದ, ಸೂಕ್ತ – Appropriate

ಅನುಸರಣಾ ಪ್ರಶ್ನೆ – Follow-up question

ನಿಯಮಾವಳಿ, ಶಿಷ್ಟಾಚಾರ ಸಂಹಿತೆ – Protocol

ಸಂವಹನ – Communication

ಅಮೂರ್ತ – ಮೂರ್ತ – Abstract

ವೈಯುಕ್ತಿಕ – ವ್ಯಕ್ತಿಗತವಲ್ಲದ – Personal - Impersonal

ಸಂವೇಗಾತ್ಮಕ – ಮಂದ ಸಂವೇದಾತ್ಮಕ – Cathected – Low affect

ಅಧ್ಯಾಪನ – Teaching

ನಿಲುವು – Views

ಉಚಿತವಾದುದು – Relevant

ತಿರುಳು – Core

ತಳಮಳಗೊಳ್ಳು, ಅಧೀರನಾಗು – Nervous

ತಟಸ್ಥ, ಯಾವುದೇ ತೀರ್ಮಾನ ಮಾಡದ – Non judgemental

ಇಷ್ಟಪಡದಿರುವುದು – Dislike

ಅಹಿತ – Discomfort

ಸಣ್ಣ ಪಟ್ಟಣ – Inner city

ಪರಿಕಲ್ಪನೆ – Concept

ತೆರಪು – Gap

ಅನುಮತಿಸಿದರೆಂದು ಅಂದುಕೊಳ್ಳುವುದು – Take for granted

ಮುಕ್ತ ಪ್ರಶ್ನೆ – Open – ended question

ಸಹಯೋಗಿಸು – Collaborate

ಪ್ರಾಸ್ತಾವಿಕ, ಆರಂಭಿಕ – Initial

ಆರಾಮದಾಯಕ – Comfortable

ರಂಗಪರಿಕರಗಳು – Props

ಮೈಚಳಿ ಬಿಡಿಸುವಂತಹ – Ice breaker

ಉತ್ತೇಜನ ಕೊಡುವಂತಹ ಚಟುವಟಿಕೆ – Warm-up activity

ತೊಡಗುವ – Engage

ಅಂಕುಡೊಂಕಾದ ಗೆರೆಗಳಿಂದ ಕೂಡಿದ ಆಟ – Squiggle game

ಒಗ್ಗಟ್ಟು – Cohesiveness

ದೃಶ್ಯರೂಪಕ – Visual

ಭೌತಿಕ – Physical

ಸಂವಾದ, ಸಂಭಾಷಣೆ, ಮಾತುಕಥೆ – Discourse

ಪ್ರಕ್ರಿಯೆ – Process

ಯಶಸ್ವ, ಸಫಲತೆ – Successful

ಸಲಹೆ – Tip

ಉತ್ತೇಜಕ, ಬೆಂಬಲಕೊಡುವ – Back-up

ವಿಷಯಗಳನ್ನು ಬಯಲಿಗೆಳೆಯುವ ದೃಶ್ಯರೂಪದ ತಂತ್ರಗಳು – Visual elicitation strategies

ಬದಲಿ – Alternative

ದಿನಚರಿ, ನಿಯತಕಾಲಿಕ – Journal

ಸೃಜನಾತ್ಮಕ – Creative

ಕಾಲ್ಪನಿಕ ಹೆಸರು – Pseudonyms

ನಕಲುಮಾಡು – Transcribe

ನಿಲುವು, ದೃಷ್ಟಿಕೋನ – Attitude

ಸ್ವೀಕೃತಿ, ಗ್ರಹಣಸಾಮರ್ಥ್ಯ – Receptivity

ಪ್ರಚೋದಕಗಳು – Prompts

ದುರ್ಬಳಕೆ – Abuse

ನಟಿಸು, ಪುನಃ ಪ್ರದರ್ಶಿಸು – Act out

ಮುಂದಕ್ಕೆ ಜಿಗಿಯಲು – Spring board

ಜೇಬಿನಲ್ಲಿಟ್ಟುಕೊಳ್ಳಬಹುದಾದ ನಿರ್ಧಾರದ ಪಟ್ಟಿ – Pocket decision maker chart

ಕಲ್ಪನೆ – Notion

ಮನಬಂದಂತೆ – Out of the hat

ಚಿತ್ರದ ಮೂಲಕ ಪ್ರಚೋದನೆ ಮಾಡುವ ವಿಧಾನ – Stimulus drawing approach

ಆಕೃತಿ, ಚಿತ್ರ, ಮೂರ್ತಸ್ವರೂಪ, ಕಲ್ಪನಾರೂಪ – Image

ಚಿಕಿತ್ಸೆ – Therapy

ಮುಕ್ತ ಸಹಯೋಗ – Free association

ಸಂವೇಗಾತ್ಮಕ – Emotional

ಉಪಪ್ರಜ್ಞೆ – Subconscious

ಪ್ರಚೋದಕ ಪರೀಕ್ಷೆಗಳು – Stimulus tests

ಕಲಾ ಚಿಕಿತ್ಸೆ – Art therapy

ಅಳತೆಗೋಲು, ಮಾನದಂಡ – Scale

ಸಾಮಾಜಿಕ ಕಾರ್ಯ – Social work

ಸಂಪನ್ಮೂಲ – Resource

ದೃಶ್ಯರೂಪದ – Visual

ಪ್ರಚೋದಕಗಳನ್ನು ವಿಂಗಡಿಸುವ, ವರ್ಗೀಕರಿಸುವ – Stimulus sorting task

ಛಾಯಾಚಿತ್ರ ಪ್ರಚೋದಕ ಸಂದರ್ಶನ – Photoelicitation interviewing

ದೃಶ್ಯಸಂಕೇತಗಳ ಮನೋಚಿತ್ರಣ – Graphic imagery

ಉತ್ತೇಜಿಸು, ಪ್ರೇರೇಪಿಸು – Prod

ಒತ್ತಡ – Compel

ಛಿದ್ರಗೊಳಿಸು, ಧ್ವಂಸಮಾಡು – Shatter

ಪ್ರಶಾಂತತೆ – Composure

ಎಚ್ಚರಿಕೆಯಿಂದ – Guarded

ವ್ಯಕ್ತಿತ್ವ, ತನ್ನತನ – Self concept

ವಸ್ತುನಿಷ್ಠವಾದ, ವಾಸ್ತವಿಕವಾದ, ಇದ್ದಂತೆಯೇ – Objective

ಅಂತಃಸತ್ವವುಳ್ಳ – Potentially significant

ವಿಧ್ಯುಕ್ತ – Formal –

ವಿಧ್ಯುಕ್ತವಲ್ಲದ – Informal

ಶೀರ್ಷಿಕೆ – Caption

ಎತ್ತಿತೋರಿಸು – Highlight

ಆದ್ಯತೆ – Prioritize

ಒತ್ತು ಕೊಡು – Accentuate

ಶಿಫಾರಸು – Recommend

ಸಮೀಕ್ಷಾ ಸನ್ನಿವೇಶ – Context of Inquiry

ಪರ್ಯಾಯವಾಗಿ – Interchangeably

ಆಪ್ಯಾಯಮಾನವಾಗಿ – Appealing

ಅನುಕೂಲಕರ – Conducive

ಸಮೂಹ ಚಟುವಟಿಕೆ – Group dynamic

ಸಮವಯಸ್ಕರ ಸಂಸ್ಕೃತಿ – Peer culture

ಸಾಮೂಹಿಕ ಜ್ಞಾನ – Collective knowledge

ಸಾಮೂಹಿಕ ದೃಷ್ಟಿಕೋನ – Collective view point

ವಿಶ್ಲೇಷಣೆ – Analysis

ಸ್ಪಷ್ಟಮಾತುಗಳಲ್ಲಿ – To articulate

ಸಾಮಾಜಿಕ ನಕಾಶೆ – Social mapping

ಅಸಮ್ಮತಿ – Dissent

ಸಮ್ಮತಿ – Consensus

ಸಬಲೀಕರಣ – Empowerment

ಅಡಚಣೆ – Interfere

ಉಪನಗರ – Suburban

ಹಾಸ್ಯ ನಾಟಕ, ಏಕಾಂಕ ನಾಟಕ – Skit

ರೇಗಿಸುತ್ತಾ – Teasing

ಉದ್ಧೃತ – Excerpt

ತಲೆಚೆಟ್ಟುಹಿಡಿಸುವುದು – Boring

ಅಂತರ್ವೈಯಕ್ತಿಕ – Interpersonal

ಬೆದರಿಕೆ – Intimidation

ಕ್ರಿಯಾಶೀಲತೆ/ಚಟುವಟಿಕೆ – Dynamics

ಮಾನದಂಡ – Criterionಕ್ರಮಶಾಸ್ತ್ರ – Methodological approach

ಕಾರ್ಯಸೂಚಿ – Agenda

ಸಾಮರ್ಥ್ಯ – Power

ಅರ್ಥಪೂರ್ಣವಾಗಿರುತ್ತದೆ – Makes sense

ಉಪಸ್ಥಿತಿ – Presense

ಭಿನ್ನಾಭಿಪ್ರಾಯ – Disagreement

ದೃಷ್ಟಿಕೋನ, ಹಿನ್ನೆಲೆ – Prespective

ಕೇಂದ್ರೀಕೃತ ಗುಂಪು – Focus group

ಕಥಾನಕ, ಘಟನೆ – Anecdote

ಟೀಕೆ/ವಿಮರ್ಶೆ – Comment